ಶ್ರೀಮತ್ಪೂಜ್ಯ

ಆನಂದತೀರ್ಥ ಭಗವತ್ಪಾದಾಚಾರ್ಯಾಭಿಧ

# ಶ್ರೀಮನ್ಮಧ್ವಾಚಾರ್ಯರು.

ಭಾಗ ೧.

## ಅಲ್ಪ ಪರಿಚಯ

ಬರೆದವ. ಅ. ರಂಗಾಚಾರ್ಯ.

ಚಾ. ವಿ. ವರ್ಷ ೮೫೮.

ಬೆಲೆ ೦—೪—೦

ಧಾರವಾಡದಲ್ಲಿ

ಶ್ರೀ. ಅಣ್ಣಾಚಾರ್ಯ ಹೊಸಕೇರಿ ಇವರಿಂದ

ವಿಜಯ ಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟು

ಶ್ರೀ. ಹುಚ್ಚಾಚಾರ್ಯ ಅಗಳಗಟ್ಟಿ ಪುರಾಣಿಕ ಕಿತ್ತೂರ ಇವರಿಂದ

ಪ್ರಕಟಿಸಲಾಯಿತು.

೨೦೦೦ ಪ್ರತಿಗಳು.

## ಶ್ರೀಮದಾನಂದತೀರ್ಥ ಭಗವತ್ಪಾದರು



ದ್ವೈತ ಸಿದ್ಧಾಂತ ಸ್ಥಾಪನಾಚಾರ್ಯರು

# ಮನದ ಮಾತುಗಳು.



**ಶ್ರೀಮದಾಚಾರ್ಯರ** ಚರಿತ್ರವನ್ನು ಬರೆದು ಕನ್ನಡಿಗರಿಗೆ ಅವರ ಮಹತ್ಕಾರ್ಯದ ಅಲ್ಪ ಪರಿಚಯ ಮಾಡಿಕೊಡಬೇಕೆಂಬ ಅಭಿಲಾಷೆಯು ಬಹು ದಿನಗಳಿಂದ ಮನದಲ್ಲಿ ಕುದಿಯುತ್ತಿತ್ತು. ಅದು ಇಂದು ಮಾರ್ಕಾಂಡೇಯ ನದೀ ತೀರದಲ್ಲಿರುವ ಹಿಂಡಲಗೀ ಕಾರಾಗಾರದಂಥ ಪವಿತ್ರಕ್ಷೇತ್ರದಲ್ಲಿ ಪರಿಪೂರ್ಣವಾಯಿತು.

**ಮ**ಹಾನುಭಾವರ ಚರಿತ್ರವನ್ನು ಸಾಕಲ್ಯವಾಗಿ ತಿಳಿಯಲು ಸಹಸ್ರಮುಖನಾದ ಆದಿಶೇಷನಿಗೂ ಅಶಕ್ಯವಾದುದು. ನನ್ನಂಥವನ ಪಾಡೇನು? ಜ್ಞಾನಿಗಳಾದ ಆಚಾರ್ಯರ ಭಕ್ತರು ಸಂಸ್ಕೃತದಲ್ಲಿ ವಿಸ್ತಾರವಾಗಿ ಹೇಳಿರುವುದನ್ನೇ ನಾನು ಆನೆಯನ್ನು ಚಿಕ್ಕ ಕನ್ನಡಿಯಲ್ಲಿ ಪ್ರತಿಬಿಂಬಿಸುವಂತೆ ಕನ್ನಡದಲ್ಲಿ ಚಿಕ್ಕದಾಗಿ ತೋರಿಸುವೆನು

**ದಾ**ಸವರ್ಯ ಜಗನ್ನಾಥರಾಯರು ಜಲವು ಹೆದ್ದೊರೆಗಾದಿ. ಮಜ್ಜನ ಪಾನ ಗೈದವರು" ಎಂದು ಹೇಳಿದ ಮಾತೇ ನನ್ನ ಹೃದಯದಲ್ಲಿ ಸ್ಥಿರವಾಗಿದೆ. ಅಂತೆಯೇ ನನ್ನೀ ನನ್ನಿಯ ಹರುಕು ಮುರುಕು ಕನ್ನಡದಲ್ಲಿ ಬರೆಯಲು ಸಾಹಸಮಾಡಿರುವೆನು. ಇದರಿಂದ ನನ್ನ ನುಡಿ ಪವಿತ್ರವಾಗುವದೆಂದೇ ನನಗೆ ಭರವಸೆ.

**ಚಾ**ರುಚರಿತರಾದ ಶ್ರೀಮದಾಚಾರ್ಯರ ಚರಿತ್ರವು ಮಾಧ್ವರೆಂದೆನಿಸಿಕೊಳ್ಳುವವರಲ್ಲನೇಕರಿಗೆ ಗೊತ್ತಿರದಿರುವದು ತೀರ ಶೋಚನೀಯ ಸ್ಥಿತಿಯು. ಇದಕ್ಕೆ ಸಂಸ್ಕೃತ ಭಾಷೆಯ ಜ್ಞಾನದ ಅಭಾವವೂ ಒಂದು ಕಾರಣವಿದೆ. ಉದರಂಭರಣದ ಉದ್ಯೋಗದಲ್ಲಿ ನಿರತರಾದ ನಮಗೆ ದೊಡ್ಡ ದೊಡ್ಡ ಗ್ರಂಥಗಳನ್ನು ಓದಲು ವೇಳೆಯೂ ಇರುವದಿಲ್ಲ; ದಾರಿದ್ರ್ಯವೂ ಬೆನ್ನೇ ಹತ್ತಿದೆ. ಇವೆಲ್ಲ ಕಾರಣಗಳಿಂದ ಭಿನ್ನವಾದ ಆದರೆ ಇವುಗಳಿಗೆ ಮೂಲವಾದ ಪರಸಂಸ್ಕೃತಿಯ ಪ್ರಭಾವದ ಮೂಲಕ ನಮ್ಮ ಎದೆಯೊಳಗಿನ ಸ್ವಧರ್ಮಶ್ರದ್ಧೆಯು ನಶಿಸಿ ಹೋಗಿರುವುದೂ ಒಂದು ಪ್ರಬಲವಾದ ಕಾರಣವಾಗಿದೆ.

ರಮಾಕಳತ್ರನ ಅನುಗ್ರಹದಿಂದ ಈ ಚಿಕ್ಕ ಚರಿತ್ರವನ್ನು ಕನ್ನಡಿಗರು, ವಿಶೇಷವಾಗಿ ಮಾಧ್ವರು, ಹೆಂಗಸರು ಗಂಡಸರು ಮುದುಕರು, ಹುಡುಗರು ಎಲ್ಲರೂ ಒಮ್ಮೆಯಾದರೂ ಓದಿ ದ್ವೈತಮತ ಸ್ಥಾಪನಾಚಾರ್ಯರ ಚರಿತ್ರವನ್ನು ಅರಿತುಕೊಳ್ಳಬೇಕು. ಈ ಪುಸ್ತಕವು ಪ್ರತಿಯೊಬ್ಬ ಮಾಧ್ವನ ಮನೆಯಲ್ಲಿರಬೇಕೆಂಬುದೇ ನನ್ನ ಬಯಕೆ.

ರುಕ್ಮಿಣೀಕಾಂತನೇ ಇದನ್ನೆಲ್ಲ ಪೂರ್ಣಮಾಡುವವನಲ್ಲವೆ? ನಾನು ಸೆರೆಮನೆಯಲ್ಲಿದ್ದರೂ ಅಲ್ಲಿ ಈ ಪುಸ್ತಕವನ್ನು ಬರೆದು ಮುಗಿಸಲು ಅವಕಾಶವನ್ನೂ ಸಲಕರಣೆಗಳನ್ನೂ ಒದಗಿಸಿಕೊಡಲು ಕಾರಾಗೃಹದ ಅಧಿಕಾರಿಗಳನ್ನು ಪ್ರೇರಿಸಿದವನು ಅವನೇ ಅಲ್ಲವೆ? ಸೆರೆಮನೆಯ ಆತಂಕದಲ್ಲಿಯೂ ನನಗೆ ೧ ಶ್ರೀಮನ್ಮಧ್ವವಿಜಯ ೨ ಶ್ರೀಮಧ್ವರ ಚರಿತ್ರವೂ ತತ್ವಬೋಧೆಯೂ (ಶ್ರೀ. ಸಿ. ಎಮ್. ಪದ್ಮನಾಭಾಚಾರ ಹಾಯಕೋರ್ಟ ವಕೀಲ ಮದ್ರಾಸ ಇವರು ಇಂಗ್ಲೀಷಿನಲ್ಲಿ ಬರದದ್ದು) ೩ ಶ್ರೀಮಧ್ವಚರಿತಾಮೃತ (ಶ್ರೀ ರಂಗಾಚಾರ್ಯರ ಕೃತ) ೪ ಮಧ್ವಚರಿತ್ರ (ಶ್ರೀಮಧ್ವ ಮುನಿನಾಮ ಸಂಘ ಉಡುಪಿಯುವರಿಂದ ಪ್ರಸಿದ್ಧವಾದದ್ದು.) ೫. ಸತ್ಕಥಾ (ನಾರಾಯಣದಾಸ ಕಾಮಲಾಪುರ ಭೀಮರಾಯರು ಬರದದ್ದು.) ಬೇರೆ ಕೆಲವು ಚಿಕ್ಕ ಚಿಕ್ಕ ಪುಸ್ತಕಗಳೂ ಗ್ರಂಥಗಳೂ ದೊರೆತು ಮನಃಸಂಕಲ್ಪವನ್ನು ಯಥಾಶಕ್ತಿ ಪೂರ್ಣಗೊಳಿಸಲು ಪ್ರೇರಣೆಯನ್ನಿತ್ತ ಆ ಭಗವಂತನ ಅಚಿಂತ್ಯಾದ್ಭುತ ಲೀಲೆಯನ್ನು ಎಷ್ಟೆಂದು ಹೊಗಳಬೇಕು? ಇದನ್ನು ಬರೆಯುವಕಾಲಕ್ಕೆ ಉಪಯೋಗಿಸಿದ ಗ್ರಂಥಗಳ ಕರ್ತೃಗಳನ್ನು ಅಭಿವಂದಿಸುವದಲ್ಲದೆ ತಪೋಭೂಮಿಯಲ್ಲಿ ನನ್ನ ಸಂಗಡಿಗರಾಗಿದ್ದ ಶ್ರೀ. ಹ. ರಾ. ಪುರೋಹಿತ ಎಂ. ಏ. ಸಂ. ಕರ್ಮವೀರ ಇವರ ಉಪಕಾರವನ್ನೂ ಸ್ಮರಿಸದಿರಲಾರೆನು. ತಮ್ಮ ಅನೇಕ ಮಹತ್ವದ ಕಾರ್ಯಕಲಾಪಗಳನ್ನು ಬದಿಗಿಟ್ಟು ಕೇವಲ ನನ್ನಲ್ಲಿಯ ಪ್ರೇಮದಿಂದ ನಾನು ಬರೆದ ಪುಸ್ತಕವನ್ನು ಓದಿ ನೋಡಿ ಮುನ್ನುಡಿಯನ್ನು ಬರೆದು ಆಶೀರ್ವದಿಸಿದ ಶ್ರೀ. ಆಲೂರ ವೆಂಕಟರಾಯರಿಗೆ ನಾನು ಎಷ್ಟು ಕೃತಜ್ಞನಾಗಿರಬೇಕೆಂಬುದನ್ನು ಬೇರೆ ಹೇಳಲಾರೆನು.

ನನಗೆ ಇನ್ನಿತರ ಸಹಾಯಗಳನ್ನಿತ್ತ ಮಹನೀಯರಿಗೂ ಸಕಾಲಕೆ ಸುಂದರವಾಗಿ ಮುದ್ರಿಸಿಕೊಟ್ಟ ಶ್ರೀ. ಹೊಸಕೇರಿ ಅಣ್ಣಾಚಾರ್ಯರಿಗೂ ತಕ್ಕ ಪಡಿಯಚ್ಚುಗಳನ್ನು ಸುಲಭವಾಗಿ ಒದಗಿಸಿಕೊಟ್ಟ ಶ್ರೀ ಶ್ರೀನಿವಾಸ ಮಂಡಲಿಕ್ಕ್ಯ ನನ್ನ ವಂದನೆಗಳು.

**ಮುಂದಿನದೊಂದು ಮಾತು.** ಈ ಪುಸ್ತಕದ ಮುದ್ರಣಕ್ಕೆ ಉಪಯೋಗಿಸಿದ ಕಾಗದ, ಚಿತ್ರಗಳ ಪಡಿಯಚ್ಚು, ಹಾಗು ಇದರ ಪುಟ ಸಂಖ್ಯೆ ಇವುಗಳ ಮಾನದಿಂದ ಈ ಪುಸ್ತಕಕ್ಕೆ ಇಟ್ಟ ಬೆಲೆಯ ಪ್ರಮಾಣವನ್ನು ಸೋಧಿಸಿದರೆ ನಾನೀಗ ಮಾಡಿದ ಸಾಹಸವು ಕರ್ನಾಟಕದಲ್ಲಿಯೇ ಮೊದಲನೆಯದೆಂದು ವಾಚಕರಿಗೆಲ್ಲರಿಗೂ ಗೊತ್ತಾಗುದಿರದು. ಈ ಪ್ರಯತ್ನಕ್ಕೆ ವಾಚಕ ವೃಂದದ ಸಹಾಯವು ದೊರೆತರೆ ನಾನು ಮುದ್ರಣ ಋಣದಿಂದ ಮುಕ್ತನಾದೊಡನೆ ಈ ಪುಸ್ತಕದ ೨ನೇ ಭಾಗವನ್ನು, ಶ್ರೀಮನ್ಮಧ್ವಾಚಾರ್ಯರ ತತ್ವಗಳು, ಕಾಲನಿರ್ಣಯ, ಅವತಾರಕಲ್ಪನೆ ಮೊದಲಾದ ವಿಷಯಗಳನ್ನು ಪ್ರಕಟಿಸುವ ಅಪೇಕ್ಷೆಯಿದೆ. ಶ್ರೀಮನ್ಮಧ್ವಾಂತರ್ಗತವೇದವ್ಯಾಸರು ಈ ನನ್ನ ಅಪೇಕ್ಷೆಯನ್ನು ಪೂರೈಸಲು ಸಮರ್ಥರಾಗಿದ್ದಾರೆ.

**ಅ. ರಂಗಾಚಾರ್ಯ**



# ಮುನ್ನುಡಿ

ಆಚಾರ್ಯರು ರಾಯರೆನಿಸಿಕೊಳ್ಳುವ ಕಾಲವಿದು; ಮಧ್ವಪದವನ್ನು ಹೇಳುವದಕ್ಕೆ ನಾಚಿ ಅದನ್ನು ಬದಲು ಮಾಡಿ ಮಾಧವನೆಂದು ಕರೆಯುಕೊಳ್ಳುವ ಕಾಲವಿದು; ಹುಟ್ಟುವೈಷ್ಣವರು ತಮ್ಮ ಮತದ ಗ್ರಂಥವನ್ನರಿಯದೆ, ಅರಿಯಲಿಚ್ಛಿಸದೆ ಅನ್ಯಮತವನ್ನು-ಪಂಥವನ್ನು ಸ್ವೀಕರಿಸುವ ಕಾಲವಿದು ಇಂಥ ಈ ಕಾಲದಲ್ಲಿ ಈ ಪುಸ್ತಕದ ಲೇಖಕರು ಶ್ರೀ ಮಧ್ವಾಚಾರ್ಯರ ಚರಿತ್ರೆಯನ್ನು ಬರೆದಿರುವದು ಸಾಹಸದ ಮಾತೆಂದೇ ಹೇಳಬೇಕಲ್ಲವೆ? ಇದು ಶ್ರೀಮನ್ಮಧ್ವಾಚಾರ್ಯರ ಚರಿತ್ರೆವನ್ನು ಶ್ರದ್ಧೆಯಿಂದಲೂ ಭಕ್ತಿಯಿಂದಲೂ ಬರೆದ ಚಿಕ್ಕ ಪುಸ್ತಕ. ಇದರಲ್ಲಿ ಲೇಖಕರು ಸಂಶೋಧನದ ಗೊಡವೆಗೆ ಹೋಗದೆ, ಐತಿಹಾಸಿಕ ದೃಷ್ಟಿಗೆ ವಿಶೇಷವಾಗಿ ಇಂಬುಗೊಡದೆ, ಕೇವಲ ಪರಂಪರಾಗತ ಚರಿತ್ರೆಯನ್ನು ಪರಂಪರಾಗತ ರೀತಿಯಲ್ಲಿ ಮಾಧ್ವರಲ್ಲಿ ಭಕ್ತಿವಿಶ್ವಾಸಗಳು ಹುಟ್ಟುವಂತೆ ಸರಳವಾಗಿಯೂ ಸುಬೋಧವಾಗಿಯೂ ಹೇಳಿರುವರು.

ಚರಿತ್ರೆಗಳನ್ನು ಬರೆಯುವ ರೀತಿಗಳು ನಾನಾ ವಿಧವಾಗಿವೆ. ಕೆಲವರು ತಾವು ಬರೆಯುವ ಚರಿತ್ರೆಯಲ್ಲಿ ಸಂಶೋಧನ ದೃಷ್ಟಿಯನ್ನು ಅವಲಂಬಿಸಬಹುದು; ಅಥವಾ ಐತಿಹಾಸಿಕ ದೃಷ್ಟಿಯನ್ನು ಕೈಕೊಳ್ಳಬಹುದು; ಇಲ್ಲವೆ ತುಲನಾತ್ಮಕ ರೀತಿಯಿಂದ ವಿವೇಚಿಸಬಹುದು. ಆದರೆ ಈ ಎಲ್ಲ ರೀತಿಗಳಲ್ಲಿ ಲೇಖಕನಲ್ಲಿ ಚರಿತ್ರನಾಯಕನ ಬಗ್ಗೆ ಭಕ್ತಿಯೂ ಪೂಜ್ಯಭಾವವೂ ತುಂಬಿರದಿದ್ದರೆ ಅದು ನಿರ್ದಯನಾದ ವಿಜ್ಞಾನಶಾಸ್ತ್ರಜ್ಞನು ಒಣ ಜ್ಞಾನಕ್ಕೋಸ್ಕರ ಚಿಕಿತ್ಸಾಪ್ರಯೋಗಗಳನ್ನು ಮಾಡುವಂತೆ ಕೇವಲ ನಿಃಸಾರವಾಗುತ್ತದೆ. ಅದೇ ಭಕ್ತಿವಿಶ್ವಾಸಗಳು ತುಂಬಿದ್ದರೆ ಅದಕ್ಕೊಂದು ಬಗೆಯ ಜೀವಕಳೆಯು ತುಂಬಿ ಬರುತ್ತದೆ. ಈ ಪುಸ್ತಕದಲ್ಲಿ ಮಿಕ್ಕ ದೃಷ್ಟಿಗಳಿಲ್ಲದಿದ್ದರೂ ಭಕ್ತಿಯೊಂದು ದೃಢವಾಗಿರುವ ಮೂಲಕ ಇದಕ್ಕೆ ಒಂದು ತರಹದ ವಿಶೇಷ ಕಳೆ

ಯುಂಟಾಗಿ ಚಿಕಿತ್ಸಾಬುದ್ಧಿಯಿಂದ ಬರೆಯುವವರಿಗೆ ಇದು ಅನ್ನ ವನ್ನು ಒದಗಿಸಿ ಕೊಡುತ್ತದೆ.

ಶ್ರೀ ಮಧ್ವವಿಜಯವೇ ಇದಕ್ಕೆ ಮೂಲಾಧಾರ. ಮಿಕ್ಕ ಚರಿತೆ ಗಳ ನೆರವಿನಿಂದ ಲೇಖಕರು ಚರಿತೆಯ ಕೆಲವು ಭಾಗವನ್ನು ಅಂದ ಗೊಳಿಸಿರುವರು. ಶ್ರೀ ಮಧ್ವವಿಜಯವು ಶ್ರೀಮನ್ಮಧ್ವಾಚಾರ್ಯರ ಚರಿತೆಯ ಬಗ್ಗೆ ನಮಗೆ ದೊರೆತಿರುವ ಗ್ರಂಥಗಳಲ್ಲಿ ಎಲ್ಲಕ್ಕೂ ಪುರಾ ತನವಾದುದು. ಶ್ರೀಮನ್ಮಧ್ವವಿಜಯದ ಕರ್ತೃಗಳ ತಂದೆಯವರಾದ ಶ್ರೀ ತ್ರಿವಿಕ್ರಮ ಪಂಡಿತರು ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು ಆದುದರಿಂದ ಅದು ಬಲುಮಟ್ಟಿಗೆ ವಿಶ್ವಸನೀಯವೆಂಬು ವಕ್ಕೆ ಸಂದೇಹವಿಲ್ಲ. ಶ್ರೀ ತ್ರಿವಿಕ್ರಮ ಪಂಡಿತರು ಮೊದಲು ಅದ್ವೈತರಿದ್ದು ಶ್ರೀಮನ್ಮಧ್ವಾಚಾರ್ಯರ ತತ್ವಗಳಿಗೆ ಲುಬ್ಧರಾಗಿ ಆ ಮತವನ್ನವಲಂಬಿಸಿದ್ದರಿಂದ ಅವರ ಗ್ರಂಥದಲ್ಲಿಯೂ ಅವರ ಮಕ್ಕಳು ಬರೆದ ಗ್ರಂಥದಲ್ಲಿಯೂ ಒಂದು ಬಗೆಯ ವಿಶೇಷ ಅಭಿ ಮಾನದ ಸ್ಫೂರ್ತಿಯು ಕಂಡು ಬರುವದು ಸಹಜ ಅದರಿಂದ ಅವರು ಬರೆದ ಈ ಚರಿತ್ರೆಯಲ್ಲಿ ಈಗ ಊಹಿಸಲಶಕ್ಯವಾದ ಅನೇಕ ಅತಿಮಾನುಷ ಸಂಗತಿಗಳು ದೊರೆಯುವದೇನೋ ನಿಜ. ಹಾಗೆಯೇ ಅದರ ಕರ್ತರು ತಾವು ಶಿಷ್ಯರಿಂದ ಕೇಳಿ ತಿಳಿದ ಸಂಗತಿಗಳನ್ನೂ ಸೇರಿ ಸಿರುವದರಿಂದಲೂ ದಕ್ಷಿಣದಲ್ಲಿ ನಡೆದ ವೃತ್ತಾಂತವು ವಿಸ್ತಾರವಾಗಿ ಬರೆಯಲ್ಪಟ್ಟಂತೆ ಉತ್ತರಕಡೆಯ ಸಂಗತಿಗಳು ಬರೆಯಲ್ಪಡದೆ ಇರು ವದರಿಂದಲೂ ಆ ಗ್ರಂಥವು ಚರಿತ್ರೆಯ ದೃಷ್ಟಿಯಿಂದ ಅಪೂರ್ಣವಾ ಗಿದೆ. ಆದರೆ ಅದರಲ್ಲಿ ಅನೇಕ ಐತಿಹಾಸಿಕ ಸಂಗತಿಗಳು ಉಲ್ಲೇಖಿಸ ಲ್ಪಟ್ಟಿರುವದರಿಂದಲೂ ವಿಶೇಷತಃ ಅದರೊಳಗೆ ಹೇಳಿದ ಕ್ರಮವು ತಪ್ಪಿಲ್ಲವೆಂದು ನಂಬಬಹುದಾದ್ದರಿಂದ ಮುಂದಿನ ಯಾವತ್ತೂ ಚರಿತ್ರೆಗಳಿಗೆ ಇದರ ಉಪಯೋಗವು ಸ್ವಲ್ಪಿಲ್ಲ ಸ್ವಲ್ಪ ಆಗೇ ಆಗುತ್ತದೆ. ಸಾರಾಂಶ, ಮಧ್ವವಿಜಯವನ್ನು ಬಿಟ್ಟು ಯಾವ ಲೇಖಕನೂ ಮಧ್ವಾ ಚಾರ್ಯರ ಚರಿತ್ರೆಯನ್ನು ಬರೆಯಲಾರನು. ಈ ಪುಸ್ತಕವು ವಿಶೇಷತಃ ಅದರ ಸಾರವಾದುದರಿಂದ ಇದಕ್ಕೆ ಒಂದು ಬಗೆಯ ವಿಶೇಷ ಬೆಲೆಯಿದೆ.

ಶ್ರೀಮಧ್ವಾಚಾರ್ಯರ ಸ್ಥಾನವು ಜ್ಞಾನಿಗಳಲ್ಲಿ ಬಹಳ ಹೆಚ್ಚಿನ ತರಗತಿಯದಾಗಿದೆ. ಶ್ರೀ ಶಂಕರಾಚಾರ್ಯರು ಶ್ರೀ ರಾಮಾನುಜಾಚಾರ್ಯರು ಇವರೇ ಮೊದಲಾದ ಆಚಾರ್ಯರೆಲ್ಲರೂ ಆಯಾ ಕಾಲಕ್ಕೆ ತಕ್ಕಂತೆ ಹಿಂದೂ ಧರ್ಮದ ಒಂದೊಂದು ಅಂಗವನ್ನು ವಿಶೇಷವಾಗಿ ಜನತೆಯ ಮುಂದಿಟ್ಟು ಅದರ ಸಂಸ್ಕೃತಿಯ ಸೌಭಾಗ್ಯವನ್ನು ತೋರಿಸಿದ್ದಾರೆ. ಶ್ರೀ ಮಧ್ವಾಚಾರ್ಯರೂ ಅದೇ ಬಗೆಯಾಗಿ ಮಾಡಿರುವರಲ್ಲದೆ ಇವರಲ್ಲಿ ಮಿಕ್ಕ ಆಚಾರ್ಯರಿಗಿಂತಲೂ ಒಂದು ವಿಶೇಷವಿದೆ. ಅದಾವುದೆಂದರೆ ಇವರು ಅದ್ವೈತ ವಿಶಿಷ್ಟಾದ್ವೈತ ಮತಾಚಾರ್ಯರನಂತರ ಆಗಿ ಹೋಗಿರುವದರಿಂದ ಇವರಿಗೆ ಆ ಮತಗಳನ್ನು ಹೆಚ್ಚು ಚಿಕಿತ್ಸಾ ಬುದ್ಧಿಯಿಂದ ಪರೀಕ್ಷಿಸಲು ಅವಕಾಶ ದೊರೆತಿದೆ. ಹಿಂದುಸ್ಥಾನದ ಅಥವಾ ಬಹುಶಃ ಇಡೀ ಜಗತ್ತಿನ ಒಟ್ಟು ತತ್ವಜ್ಞಾನಗಳಲ್ಲಿ ನಮ್ಮ ಸಂಸ್ಕೃತಿಯನ್ನು ಕಾಪಾಡಿಕೊಂಡು ಎರಡು ತುಟ್ಟ ತುದಿಗಳಲ್ಲಿ ನಿಂತುಕೊಂಡಿರುವ ತತ್ವಜ್ಞಾನಗಳೆಂದರೆ ಒಂದು ಶ್ರೀ ಶಂಕರಾಚಾರ್ಯರದು; ಇನ್ನೊಂದು ಶ್ರೀಮಧ್ವಾಚಾರ್ಯರದು. ಈ ಎರಡು ತತ್ವಜ್ಞಾನಗಳ ನಡುವೇ ಮಿಕ್ಕ ಎಲ್ಲ ತತ್ವಜ್ಞಾನಗಳು ಹೆಚ್ಚುಕಡಿಮೆ ಪ್ರಮಾಣದಿಂದ ಅಡಕವಾಗಿವೆ. ಈ ತತ್ವಜ್ಞಾನದ ಮತ್ತೊಂದು ವಿಶೇಷವೆಂದರೆ ಇವರು ತಮ್ಮ ಪೂರ್ವದ ಮತಗಳನ್ನು ಸಪ್ರಮಾಣವಾಗಿ ಖಂಡಿಸಿ ಭಾಷ್ಯ ಮುಂತಾದವುಗಳನ್ನು ಬರೆದಂತೆ ಇವರ ತರುವಾಯ ಮತ್ತಿನ್ನಾರೂ ಇವತ್ತಿನವರೆಗೂ ಇವರ ಮತವನ್ನು ಪ್ರತ್ಯಕ್ಷವಾಗಿ ಖಂಡಿಸಿ ಭಾಷ್ಯ ಮುಂತಾದವನ್ನು ಬರೆದಿಲ್ಲ. ಆದುದರಿಂದ ಇವರ ತತ್ವಜ್ಞಾನದ ವಿಶಿಷ್ಟವಾದ ಕಾಂತಿಯು ಇನ್ನೂ ಅಚ್ಚಳಿಯದೆ ಹೊಳೆಯುತ್ತದೆ.

ಶ್ರೀಮನ್ಮಧ್ವಾಚಾರ್ಯರ ಸಂಪ್ರದಾಯವು ಅದ್ವೈತ ಮತದಷ್ಟು ವಿಸ್ತಾರವಾಗಿ ಪ್ರಚುರಗೊಂಡಿರುವದಿಲ್ಲವೆಂಬುದೇನೋ ನಿಜ ಅಲ್ಲದೆ ಈ ಸಂಪ್ರದಾಯದ ಜ್ಞಾನಿಗಳು ತಮ್ಮ ಮತ ತತ್ವಗಳನ್ನು ಈಗಿನ ಕಾಲಕ್ಕೆ ಸರಿಯಾದ ಹೊಸ ಪದ್ಧತಿಯಲ್ಲಿ ಸಾಕಷ್ಟು ಪ್ರಸಾರಗೊಳಿಸುವದಕ್ಕೆ ದುರ್ಲಕ್ಷ ಮಾಡಿರುವರೆಂಬುದು ನಿಜ. ಆದರೂ ಕೂಡ ಮಧ್ವಾಚಾರ್ಯರ ತತ್ವಗಳಲ್ಲಿ ಅನೇಕ ತತ್ವಗಳು ಇಂದಿಗೆ

ಜನರ ಮನಸ್ಸಿನಲ್ಲಿ ದೃಢವಾದ ಪ್ರಭುತ್ವವನ್ನು ಪ್ರಸ್ಥಾಪಿಸಿದ್ದು ಅವು ಬಹುಶಃ ಜಗನ್ಮಾನ್ಯವಾಗಿವೆ. ಉದಾಹರಣಕ್ಕೆಂದು ಜಗತ್ತು ಸತ್ಯ, ಪರಮೇಶ್ವರನು ಅಣುರೇಣು ತೃಣಕಾಷ್ಠದಲ್ಲಿ ವ್ಯಾಪ್ತನು; ಆತನು ಅಲೌಕಿಕಗುಣಪೂರ್ಣನು; ಜಗತ್ತೆಲ್ಲ ಆತನ ಅಧೀನವು; ಜ್ಞಾನಯುಕ್ತ ಭಕ್ತಿಯೇ ಪರಮಶ್ರೇಷ್ಠ ಸಾಧನವು; ಇವೇ ಮುಂತಾದ ತತ್ವಗಳು ಜಗತ್ತಿನ ಈಗಿನ ಪ್ರತಿಯೊಂದು ವಿಚಾರ ಪ್ರವಾಹದಲ್ಲಿ ಬಲು ಆಳವಾಗಿ ಬೇರೂರಿರುವದನ್ನು ನಾವು ಕಾಣಬಹುದು. ಇನ್ನೂ ಕೆಲವು ತತ್ವಗಳು ಇಂದಿಗೆ ಜನತೆಗೆ ರುಚಿಸಿರುವದಿಲ್ಲ. ಅವು ಈ ಮತವನ್ನು ಒಂದು ಬಗೆಯ ಜುಗುಪ್ಸಾ ದೃಷ್ಟಿಯಿಂದ ನೋಡಲಿಕ್ಕೆ ಕಾರಣವಾಗಿವೆ. ಉದಾಹರಣಕ್ಕಾಗಿ ತಾರತಮ್ಯ ಸಿದ್ಧಾಂತ, ನಮತಾಬುದ್ಧಿಯ ವ್ಯಾಖ್ಯೆ, ಜೀವ ತ್ರೈವಿಧ್ಯ, ತಾಮಸಿಗಳಿಗೆ ಮುಕ್ತಿಯಿಲ್ಲವೆಂಬ ಸಿದ್ಧಾಂತ, ಇವೇ ಮುಂತಾದವು. ಆದರೆ ಅವು ಇಂದಿಲ್ಲ ನಾಳೆ ಬೇರೆ ಸ್ವರೂಪದಲ್ಲಿ ಮಂಡಿಸಲ್ಪಟ್ಟು ಜಗತ್ತಿಗೆ ಮಾನ್ಯವಾಗಬಹುದೆಂದೂ ಶ್ರೀಮಧ್ವಾಚಾರ್ಯರು ಅತ್ಯಂತ ನಿಷ್ಠುರವಾಗಿ ಹೇಳಿದ್ದರೂ ನಿರ್ಬಾಧವಾದ ಸತ್ಯವನ್ನೇ ನುಡಿದಿರುವರೆಂಬುದೂ ಜಗತ್ತಿನ ನಿದರ್ಶನಕ್ಕೆ ಬಾರದಿರದೆಂದು ನಮ್ಮ ದೃಢವಾದ ನಂಬಿಗೆ ಆದರೆ ಈ ವಿಷಯದಲ್ಲಿ ಶ್ರೀ ಮಧ್ವಾನುಯಾಯಿಗಳೇ ಮಾಡತಕ್ಕ ಕೆಲಸಗಳು ಅನೇಕವಾಗಿವೆ. ನಮ್ಮ ಮತದವರು ಹೊಸದೊಂದು ದಾರಿಯನ್ನು ಹಿಡಿಯದೆ ಗತ್ಯಂತರವಿಲ್ಲ. ಇಂದಿನವರೆಗೆ ತುಳಿಯುತ್ತ ಬಂದ ದಾರಿಯಲ್ಲಿಯೇ ಸಾಗಿದರೆ ನಮ್ಮ ಮತವು ಉದ್ಧಾರವಾದೀತೆಂದು ನಮಗೆ ಅನಿಸುವದಿಲ್ಲ. ಹಳೆಯ ಪಂಡಿತ ವರ್ಗಕ್ಕೂ ಹೊಸ ಪಾಮರ ವರ್ಗಕ್ಕೂ ತಳಕು ಹಾಕುವ ಹೊಸದೊಂದು ಸುಶಿಕ್ಷಿತ ವರ್ಗವು ಹೊರಟು ನಮ್ಮ ಮತ ಗ್ರಂಥಗಳನ್ನೂ ತತ್ವಜ್ಞಾನವನ್ನೂ ಹೊಸ ಸ್ವರೂಪದಲ್ಲಿ ಇಡುವದು ಅತ್ಯಂತ ಅವಶ್ಯವಿದೆ.

ಒಟ್ಟಿಗೆ ಹೇಳುವದೇನಂದರೆ ಸಮ-ವಿಷಮಗಳ ಸುಂದರವಾದ ಸಮನ್ವಯವು ಮಧ್ವಮತದ ಮುಖ್ಯ ಸಾರವು. ಏಕ-ಅನೇಕಗಳ ಅಂದವಾದ ಹೊಂದಿಕೆಯು ಇದರಲ್ಲಿ ಕಂಡುಬರುತ್ತದೆ ಆದರ ಈ ಸೌಂದ

ರ್ಯವನ್ನು ಜಗತ್ತಿನ ನಿದರ್ಶನಕ್ಕೆ ತಂದುಕೊಡುವದೇ ಮಾಧ್ವರ ಮುಖ್ಯ ಕೆಲಸ. ಈ ಕೆಲಸಕ್ಕೆ ಮಾಧ್ವರು ಮೊದಲು ಮಾಡಲು ಅವಸರವುಂಟಾಗುವಂತೆ ಶ್ರೀಮನ್ಮಧ್ವಾಚಾರ್ಯರ ಚರಿತ್ರೆಯ ಪರಿಚಯವನ್ನು ಎಲ್ಲರಿಗೂ ಮಾಡಿ ಕೊಡಲು ಶ್ರೀ ರಂಗಾಚಾರ್ಯರು ಅಣಿಯಾದದ್ದು ನನಗೆ ಬಹಳ ಸಂತೋಷದ ಸಂಗತಿಯಾಗಿದೆ.

ಪುಷ್ಯ ಬಹುಳ ೫
ಚ. ವಿ. ವರ್ಷ ೮೫೮

ಆಲೂರ ವೆಂಕಟರಾಯ.

———

**ಶ್ರೀ ಪಲಾಸಿಕಾ (ಹಲಸಿ) ಕ್ಷೇತ್ರದಲ್ಲಿ ದೈವೀಜ್ಯೋತಿಯಿಂದ**
**ಬೆಳಬೆಳಗಿದ, ನನ್ನ ಕುಲಗುರುಗಳಾದ**



ವೈ. ವಾ. ಶ್ರೀಮತ್ಪೂಜ್ಯ

## ಪಾಂಘುರೀ ಸಮೀರಣಾಚಾರ್ಯರ

**ದಿವ್ಯ ಚರಣಗಳ ಸಂಸ್ಮರಣಾರ್ಥವಾಗಿ ಈ ಚಿಕ್ಕ ಕೃತಿಯು.**

# ಶ್ರೀಮನ್ಮಧ್ವಾಚಾರ್ಯರು.



**ಜಯತಿ ಶ್ರೀಮದಾನಂದತೀರ್ಥಮಾರ್ತಾಂಡಚಂಡಗೌಃ ।**
**ಯತ್ಸಂಪರ್ಕಾತ್ ಸತಾಂ ಮೋಹಶರ್ವರೀಂ ಸಮುದೀದಲತ್ ॥**

## ಅವತಾರ ಕಾರಣ.

ಅಂದಿನ ಹಿಂದುಸ್ಥಾನದ ಸೊಬಗು ಸೌಂದರ್ಯಗಳು ಇಂದಿಲ್ಲ ವೇದಮಂತ್ರಗಳಿಂದ ಸ್ತುತಿಸಿ ಸಾಕ್ಷಾನ್ನಾರಾಯಣನನ್ನು ಪ್ರತ್ಯಕ್ಷ ಕಂಡು ನಿರಂತರ ಪ್ರೇಮಪ್ರವಾಹರೂಪ ಭಕ್ತಿರಸದಲ್ಲಿ ಲೋಲಾಡಿದ ಶುಕಾದಿಯೋಗಿಗಳು ಇಂದು ಕಣ್ಣಿಗೆ ಕಾಣಿಸಲೊಲ್ಲರು. ಸೂತ್ರಗಳನ್ನು ಹೇಳಿ ವೇದಾರ್ಥವನ್ನು ನಿರ್ಣಯಿಸಿದ ಶ್ರೀವೇದವ್ಯಾಸರೂ ಇಂದಿಗೆ ಅಗೋಚರರು. ಹೀಗಾದುದರಿಂದ ಜ್ಞಾನಭಾಂಡಾರವು ಭಂಡ ಭಂಡಾರಿಗಳ ಕೈಯಲ್ಲಿ ಸಿಕ್ಕು ಸೊರಗಿ ಕೊರಗಿ ಕ್ಷೀಣದೆಸೆಗೈದಿವೆ ಜ್ಞಾನ ಸೌರಭ್ಯದ ಸುರಭಿಯು ನಷ್ಟವಾಗಿ ಆ ವೃಕ್ಷದ ಬೇರುಗಳು ಕೂಡ ಉಂಟೋ ಇಲ್ಲವೋ ಎನ್ನುವಂತಹ ಸ್ಥಿತಿಯುಂಟಾಗಿ ಎಲ್ಲ ಕಡೆಗೂ ಅಜ್ಞಾನವು ಹಬ್ಬಿ ಹೋಗಿದೆ. ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮನು ಇಂದು ನಿರ್ಗುಣ ನಿರಾಕಾರನಾಗಿರುವನು ಪ್ರತಿಯೊಬ್ಬನೂ ತಾನು ಬ್ರಹ್ಮನೇ ಎಂದು ಹೇಳಿಕೊಳ್ಳುತ್ತಿರುವನು. ಈ ಜಗತ್ತೇ ಮಾಯಾಮಯ. ಮಿಥ್ಯೆಯೆಂದು ಹೇಳಿ 'ನನ್ನ ಹೊರ್ತು,' ಬ್ರಹ್ಮನ ಹೊರ್ತು, ಬೇರೊಂದೇನೂ ನಿಜವಿಲ್ಲವೆಂಬ ಸ್ವಾರ್ಥಮಯ ಅಜ್ಞಾನದ ಪ್ರಸಾರವೇ ಹೆಚ್ಚಾಗಿದ್ದುದರಿಂದ "ಋಣಂ ಕೃತ್ವಾ ಘೃತಂ ಪಿಬೇತ್" ಎನ್ನುವ ಚಾರ್ವಾಕಮತವೇ ಎಲ್ಲ ಕಡೆಗೂ ಹಬ್ಬಿ ಜಗತ್ತಿಗೆ ಆವಶ್ಯಕವಾದ ರೀತಿ, ನೀತಿ, ಜ್ಞಾನ, ವಿಜ್ಞಾನಗಳ ಮಡಿಕೆಯು ಮುರಿದ ದುರವಸ್ಥೆಯು ಎಲ್ಲೆಡೆಯಲ್ಲಿಯೂ ವ್ಯಾಪಿಸಿದ್ದುದರಿಂದ ಸಜ್ಜನರು ಮುಂದೇನು ? ಎಂದು ತೊಳಲುತ್ತಿರುವರು; ಬಳಲುತ್ತಿರುವರು.

ಧರ್ಮೋದ್ಧಾರಕಾರ್ಯವೇ ಮುಖ್ಯವಾಗಿದ್ದ ಶ್ರೀ ನಾರಾಯಣನಿಗೆ ಭಾರತೀಯರ ಬಳಲಿಕೆಯ ವಾರ್ತೆಯು ಬ್ರಹ್ಮಾದಿಗಳ ಮುಖಾಂತರ ತಲುಪದಿರಲಿಲ್ಲ! ಪರೋಪಕಾರದಲ್ಲಿಯೇ ನಿರತರಾದ ದೇವತೆಗಳಿಗೆ ಭಾರತೀಯರ ನಲುವಾಗಿ ಕರುಣೆಬಾರದಿರುವದೇ ! ಸರ್ವಜ್ಞನಾದ ಭಗವಂತನಿಗೆ ತನ್ನ ಧರ್ಮಕ್ಷೇತ್ರವೂ ಕಾರ್ಯಕ್ಷೇತ್ರವೂ ಆದ ಭರತಭೂಮಿಯ ಜನರಿಗೆ ಕುರುಡುತನದಿಂದ ಉಂಟಾದ ದುರವಸ್ಥೆಯನ್ನು ಕೇಳಿ ಸಹನವಾಗುವದು ಹೇಗೆ ? ಅವನು ತಾನಾಗಿಯೇ ಹೊರಡಲು ನುವಾದನು. ಆದರೆ ಶಾಙ್ರ್ಗಚಕ್ರಗದಾದ್ಯಾಯುಧಗಳನ್ನು ಉಪಯೋಗಿಸುವಷ್ಟರ ಮಟ್ಟಿಗಿನ ಅವಸರವಿರಲಿಲ್ಲ. ವ್ಯಾಸಾವತಾರದಲ್ಲಿ ಗೈದ ಸೂತ್ರಾರ್ಥಗಳ ಯಥಾರ್ಥ ಬೋಧವನ್ನು ಜನರಿಗರುಹಿ ತನ್ಮೂಲಕವಾದ ಪಂಥಮಾರ್ಗದಿಂದಲೇ ಪ್ರಾಣನಿಗಿಂತಲೂ ಪ್ರಿಯರಾಗಿದ್ದ ಭಕ್ತರ ಉದ್ಧಾರವನ್ನು ಮಾಡಬೇಕಾಗಿತ್ತು. ತನ್ನ ಚಿಕ್ಕ ಮಗನ ಮೇಲೆ ಭಗವಂತನ ವಿಶ್ವಾಸ ಬಹಳ ಅವನ ಕಾರ್ಯಕ್ಷಮತೆಯೂ, ಕೌಶಲ್ಯವೂ ಅವನಿಗೆ ಮನಗಂಡವಾಗಿದ್ದವು ರಾಮಾವತಾರದಲ್ಲಿ ಮಾಡಿದ ಸೇವೆಯನ್ನೂ ತೋರಿದ ಜ್ಞಾನ ಭಕ್ತಿಗಳನ್ನೂ ಅವನು ಮರೆಯುವದು ಸಾಧ್ಯವೇ ? ಹಾಗೆಯೇ ಶ್ರೀಕೃಷ್ಣಸ್ವರೂಪದಲ್ಲಿ ತನ್ನನ್ನು ಅನನ್ಯಭಕ್ತಿಭಾವಗಳಿಂದ ಸೇವೆಗೈದು ದುಷ್ಟಸಂಹಾರಪೂರ್ವಕ ಶಿಷ್ಟಪಾಲನ ಮಾಡಲು ಸಹಾಯಕನಾದ ಭೀಮಸೇನನ ಕಾರ್ಯವು ಕಣ್ಣು ಮುಂದೇ ಕಟ್ಟಿತ್ತು. ಆದುದರಿಂದ ಪ್ರಭುವು ಮಂದಹಾಸದಿಂದ ಇಂದಿರೆಯ ಕಡೆಗೊಮ್ಮೆ ನೋಡಿ, ಅವಳ ಪಾರ್ಶ್ವದಲ್ಲಿಯೇ ಕುಳಿತ ಮಗು ಪ್ರಾಣೇಶನನ್ನು ಪ್ರೇರಕದೃಷ್ಟಿಯಿಂದ ನಿರೀಕ್ಷಿಸಿದನು ಒಡನೆಯೇ ಸ್ವಾಮಿಯ ಮನವೊಲವನ್ನು ತಿಳಿದು ವಾಯುವು ತಾನೇ ಕೃತಾರ್ಥನೆಂದು ಬಗೆದು ಆನಂದದಿಂದ ಮೈಯುಬ್ಬಿ ದೇವತೆಗಳನ್ನು ದಯಾಮಯ ದೃಷ್ಟಿಯಿಂದ ನೋಡುತ್ತ ಕೈಗಳನ್ನು ಜೋಡಿಸಿಕೊಂಡು ಎದ್ದು ನಿಂತನು. ಆಗ ಭಗವಂತನು ಮೇಘಗಂಭೀರವಾಣಿಯಿಂದ ಮುಖ್ಯಪ್ರಾಣನಿಗೆ ಭೂಲೋಕದಲ್ಲಿ ಅವತರಿಸಿ, ಮಿಥ್ಯಾಜ್ಞಾನದಿಂದ ಅಂಧರಾಗಿ ಕರ್ತವ್ಯವನ್ನು ಅರಿಯದೆ ಹೋರಾಡುತ್ತಿರುವ ಜನರಿಗೆ ಯೋಗ್ಯಜ್ಞಾನವನ್ನು ಸುರಿ, ವೇದ

ಉಪನಿಷತ್ತು ಹಾಗು ಸೂತ್ರಗಳ ನಿಜಾರ್ಥವನ್ನು ಪ್ರಸಿದ್ಧಪಡಿಸಿ ಸತ್ಯಜ್ಞಾನದಿಂದ ಸಜ್ಜನರನ್ನು ಆನಂದಪಡಿಸೆಂದು ಅಪ್ಪಣೆಮಾಡಿದನು. ಪ್ರಾಣದೇವನೂ ಪರಮಾತ್ಮನ ಚರಣಗಳಿಗೆ ಅಭಿವಂದಿಸಿ ಒಪ್ಪಿಗೆಯನ್ನಿತ್ತನು. ಇವನ್ನೆಲ್ಲ ಅನಿಮೇಷ ನೇತ್ರಗಳಿಂದ ನೋಡುತ್ತ ನಿಂತ ದೇವತೆಗಳು ತಮ್ಮ ಕಾರ್ಯವು ಆಯಿತೆಂದೇ ತಿಳಿದು ಸಂತೋಷದಿಂದ ಸರ್ವಾಂತರ್ಯಾಮಿಯನ್ನು ವಂದಿಸಿ ಹೊರಟುಹೋದರು.

ಇದೇ ಸಮಯದಲ್ಲಿ ಭಾರತದ ಗುರುಮನೆಯೂ ಅರಮನೆಯೂ ಆದ ಕರ್ನಾಟಕದೊಳಗಣ ಜನತೆಯು ಧರ್ಮೋದ್ಧಾರದ ಸಲುವಾಗಿ ಹೆಚ್ಚಿಗೆ ಚಿಂತಾತುರನಾಗಿತ್ತು. ಶಿಷ್ಯರ ಅಜ್ಞಾನವನ್ನು ದೂರ ಮಾಡುವದು ಗುರುಸ್ಥಾನದ ಕರ್ತವ್ಯವಲ್ಲವೆ? ಉಡುಪಿಯು* ಕರ್ನಾಟಕದೊಳಗಿನದೊಂದು ಪವಿತ್ರ ಕ್ಷೇತ್ರವು. ಇದಕ್ಕೆ ರಜತಪೀಠಪುರ† ವೆಂದು ಮೊದಲಿನಿಂದ ಕರೆಯುತ್ತಿರುವರು. ಇಲ್ಲಿ ಶ್ರೀ ಅನಂತೇಶನ ದೇವಾಲಯವು ಪುರಾತನಕಾಲದಿಂದಲೂ ಪ್ರಸಿದ್ಧವಿದೆ. ಸಮುದ್ರಸಾಧನ ನಿಕಟ ಸಾನ್ನಿಧ್ಯವೂ ಈ ಕ್ಷೇತ್ರಕ್ಕಿದೆ. ಹೀಗೆಲ್ಲ ರೀತಿಯಿಂದ ಅನುಕೂಲವಾಗಿದ್ದ ಕ್ಷೇತ್ರದಲ್ಲಿ ಧರ್ಮಜ್ಞಾನಿಗಳೂ ನಿಷ್ಠಾವಂತರೂ ಇರುವದು ಸ್ವಾಭಾವಿಕವೇ ಸರಿ. ಹೀಗೆ ಸರ್ವಪ್ರಕಾರದಿಂದ ಪರಿಪೂರ್ಣವಾದ ಕ್ಷೇತ್ರದಲ್ಲಿ ಶ್ರೀಮದನಂತಶಯನನ ರಥೋತ್ಸವವು ಬಹು ವಿಜೃಂಭಣೆಯಿಂದ ನಡೆದ ಕಾಲಕ್ಕೆ ಹೇವನೊಬ್ಬನು ರಥದ ಧ್ವಜದ ಪತ್ತರ ಏರಿಹೋಗಿ ಅಲ್ಲಿ ಒಂದೇ ಕಾಲಿನಿಂದ ಕುಣಿಯುತ್ತ ಹೀಗೆ ಸಾರಿ ಸಾರಿ ಹೇಳಿದನು 'ಎಲ್ಲರೂ ಕೇಳಿರಿ; ನೀವೀಗ ಅಜ್ಞಾನದಲ್ಲಿ ತೊಳಲುತ್ತಿರುವಂತೆ ಇನ್ನು ಮುಂದೆ ಬಹುದಿನ ಬಳಲುವ ಕಾರಣವಿಲ್ಲ. ಸಾಕ್ಷಾತ್ ವಾಯುದೇವರು ಇಲ್ಲಿಯೇ ನಮ್ಮ ಸೀಮೆ

---

* ಉಡಪ–ಚಂದ್ರ ಉಡಪಿನ್–ಚಂದ್ರನನ್ನು ಧರಿಸಿದವ ಚಂದ್ರಮೌಳೀಶ್ವರನ ದೇವಾಲಯ ಇಲ್ಲಿ ಇದೆ.

† ರಜತ–ಬೆಳ್ಳಿ ಪೀಠ–ಗದ್ದುಗೆ. ಬೆಳ್ಳಿಯ ಗದ್ದುಗೆ ಇದ್ದ ಊರು

ಯಲ್ಲಿಯೇ ಮನುಷ್ಯರೂಪದಿಂದ ಅವತರಿಸಿ ಸತ್ಯಜ್ಞಾನವನ್ನು ಎಲ್ಲರಿಗೆ ಬೋಧಿಸುವರು. ಆದುದರಿಂದ ಎಲ್ಲರೂ ಸಮಾಧಾನದಿಂದ ಸಂತೋಷದಿಂದ ಇರಬೇಕು ಸಜ್ಜನರು ಆನಂದಪಡಲಿ; ದುಷ್ಟರು ಓಡಿಹೋಗಲಿ. ದುಃಖಪಡಲಿ '' ಎಂದು. ಹೇವನ ವಿಚಿತ್ರ ನರ್ತನದಿಂದ ಎಲ್ಲರಿಗೂ ಸೋಜಿಗವೆನಿಸಿತು ವಿಶ್ವಾಸವೆನಿಸಿತು ಆನಂದವಾಯಿತು. ಇದು ದೇವದೇವೇಶನ ದಯವೆಂದು ಎಲ್ಲರೂ ಅಂದುಕೊಂಡರು.

## ಅವತಾರ.

ಉಡುಪಿಯ ಸಮೀಪದಲ್ಲಿಯೇ "ಪಾಜಕಾಕ್ಷೇತ್ರ''ವೆಂಬುದೊಂದು ಕಿರಿಹಳ್ಳಿ ಇದಕ್ಕೆ ಹಳ್ಳಿಯನ್ನುವದಕ್ಕಿಂತಲೂ ಮುನಿವಾಸಕ್ಕೆ ಯೋಗ್ಯವಾದ ಆಶ್ರಮವೆಂದೆನ್ನಬಹುದು. ಇಲ್ಲಿಯೂ ಆಶ್ರಮದ ಪಾವಿತ್ರ್ಯವು ಜ್ಞಾನಿಗಳ ಸಂಸರ್ಗದಿಂದ ಉಂಟಾಗಿತ್ತು. ಈ ಹಳ್ಳಿಯಲ್ಲಿ "ನಡ್ಡಂತಿಲ್ಲಾಯ'' "ನಡುವಂತಿಲ್ಲಾಯ'' ಅಂದರೆ ನಡುಮನೆಭಟ್ಟರೆಂಬ ವಿದ್ವಾಂಸರು ಇರುತ್ತಿದ್ದರು ಇವರಿಗೆ ಅನುರೂಪ ಅನುಗುಣಳಾದ ವೇದವತಿ ಎಂಬ ಸತಿಯಿದ್ದಳು. ಈ ನಡುಮನೆಯವರಿಗೆ ಭಟ್ಟಪದವು ವಿದ್ವತ್ಸಂಪತ್ತಿನಿಂದ ದೊರೆತಿತ್ತು. ಇವರಲ್ಲಿ ವಿದ್ವತ್ತೆಯಷ್ಟೇ ಶಾಂತಿಯೂ ತ್ಯಾಗವೂ ನೆಲೆಗೊಂಡಿದ್ದವು. ಇಹಕ್ಕೆಂದೇ ಮಧ್ಯಗೇಹ (ನಡುಮನೆ) ಭಟ್ಟರೆಂದರೆ ಎಲ್ಲರಿಗೂ ಅಭಿಮಾನ. ಎಲ್ಲರಿಗೂ ಹೆಮ್ಮೆ ಈ ಸಾಧು ದಂಪತಿಗಳಿಗೆ ಇಬ್ಬರು ಗಂಡುಮಕ್ಕಳಾಗಿದ್ದರೂ ಅವರು ಅಲ್ಪಾಯುಷಿಗಳಾಗಿದ್ದರು ಕನ್ಯೆಯೊಬ್ಬಳು ಇದ್ದರೂ, ಇವರ ಪುತ್ರಸಂತಾನದ ಬಯಕೆ ಪೂರ್ಣವಾಗಿರಲಿಲ್ಲ. ಇದಕ್ಕಾಗಿ ಸತಿಪತಿಗಳಿಬ್ಬರೂ "ಪಯೋವ್ರತ'' ಮೊದಲಾದ ವ್ರತಗಳಿಂದ ಶ್ರೀ ಅನಂತೇಶ್ವರನ ಸೇವೆಯನ್ನು ಆರಂಭಿಸಿದರು. ದೇಹವನ್ನು ಸೊರಗಿಸಿದರು ಮನವನ್ನು ಮುರುಗಿಸಿದರು. ಚಿತ್ತವನ್ನು ದೇವನಲ್ಲಿ ನೆಲೆಗೊಳಿಸಿ ೧೨ ವರ್ಷಗಳ ವರೆಗೆ ತೀವ್ರ ತಪಸ್ಸನ್ನು ಆಚರಿಸಿದರು. ಆಯುಷ್ಯವಂತನೂ ಜ್ಞಾನಿಯೂ, ಸಪ್ತಕುಲೋದ್ಧಾರಕನೂ ಆದ ಮಗನು ಬೇಕೆಂಬುದೇ ಇವರ ಬಯಕೆ. ಕುಲಪತಿಯಾದ ಅನಂತೇಶನ ಅನುಗ್ರಹದಿಂದ ಈ ಬಯಕೆಯು ಪೂರ್ಣವಾಗುವ ಹೊತ್ತು ಬಂತು. ವೇದವತೀದೇವಿಯು ಗರ್ಭಿಣಿಯಾಗಿ

ಹತ್ತನೇ ತಿಂಗಳಲ್ಲಿ ಪುತ್ರರತ್ನವನ್ನು ಪಡೆದಳು. ಅದೇ ಸ್ಥಾನವು ವಾಯುದೇವರಿಗೆ ಆವಾಸಯೋಗ್ಯವಾಗಿ ತೋರಿತು. ಕೂಡಲೆ ವಾಯುದೇವರು ಸರ್ವಲಕ್ಷಣಸಮನ್ವಿತವಾದ ಆ ನೂತನ ದೇಹದಲ್ಲಿ ಪ್ರವೇಶ ಮಾಡಿದರು. ಆ ಸಮಯದಲ್ಲಿ ದೇವದುಂದುಭಿಗಳು ಮೊಳಗಿದವು.

ಈ ಹೊತ್ತಿನಲ್ಲಿ ಭಟ್ಟರು ನಿತ್ಯಕ್ರಮದಂತೆ ಅನಂತೇಶ್ವರನ ಪೂಜೆಗೆ ಹೋಗಿದ್ದರು ಪೂಜೆಯಲ್ಲಿ ತೊಡಗಿದ ಇವರಿಗೆ ಅಲ್ಲಿಯೂ ಅನನುಭೂತವಾದ ಅಕೃತ್ರಿಮ ಆನಂದಲಹರಿಗಳ ಅನುಭವವಾಯಿತು. ಭಟ್ಟರು ಪೂಜೆಯನ್ನು ಮುಗಿಸಿಕೊಂಡು ಹೊರಳಿ ಬರುವ ಸಮಯದಲ್ಲಿ ಅವರ ಸ್ನೇಹಿತರೊಬ್ಬರು "ಭಟ್ಟರೇ, ತಮಗೆ ಪುತ್ರಪ್ರಾಪ್ತಿಯಾಯಿತು." ಎಂದು ಹೇಳಿದರು. ಅದಕ್ಕೆ ಭಟ್ಟರು "ವಾಸುದೇವನ ಅನುಗ್ರಹವೇ ಸೈ'' ಎಂದು ಅಂದರು. ಕೂಡಲೆ ಮನೆಗೆ ಬಂದು ಜಾತಕರ್ಮಾದಿಗಳನ್ನು ನಡೆಯಿಸಿದರು. ಈ ಸಮಯದಲ್ಲಿ ಆ ಊರ ಜನರೆಲ್ಲ ಆನಂದೋತ್ಸವಗಳನ್ನು ಮಾಡಿದರು. ಈ ಸಂದರ್ಭದಲ್ಲಿ ಭಟ್ಟದಂಪತಿಗಳಿಗಾದ ಆನಂದವನ್ನು ವರ್ಣಿಸುವದು ಯಾರಿಗೆ ತಾನೆ ಸಾಧ್ಯ? ಅಂತೂ ಸತಿಪತಿಗಳು ತಪಸ್ಸಿನ ಫಲವನ್ನು ಹತ್ತುಪಟ್ಟಾಗಿ ಪಡೆದರು ವಸುದೇವದೇವಕಿಯರು ಶ್ರೀ ವಾಸುದೇವನನ್ನು ಪಡೆದು ಸಂತಸಬಟ್ಟಂತೆ ಇವರೂ ಕೃತಕೃತ್ಯರಾದರು

ಅನೇಕ ಬ್ರಹ್ಮಾಂಡಗಳೊಳಗಿನ ಜೀವರಾಶಿಗಳನ್ನು ಕಾಲನಾಮಕ ತೊಟ್ಟಿಲಲ್ಲಿ ಹಾಕಿ ಅವರವರ ಯೋಗ್ಯತೆಗನುಸರಿಸಿ ಸುಖದುಃಖಮಿಶ್ರ ಗತಿಯನ್ನು ಕೊಡುವ ಪ್ರಾಣೇಶನನ್ನು ಇಹತ್ತು ವಾಜಕಾಕ್ಷೇತ್ರದ ಸೀಮಂತಿನಿಯರೆಲ್ಲರೂ ಕೂಡಿ ತೊಟ್ಟಿಲಲ್ಲಿ ಹಾಕಿ ವಾಸುದೇವನೆಂದು ಹೆಸರು ಇಟ್ಟರು. ಹೀಗೆ ಈ ಮುತ್ತೈದೆಯರಿಂದ ಇಟ್ಟ ಹೆಸರು ದೇವತೆಗಳಿಗೂ ಒಪ್ಪಿತವಾಯಿತು! ಇವನು ವಾಸುದೇವ ಭಕ್ತನು; ವಾ+ಅಸು-ಪ್ರಾಣ+ದೇವನು. ಆದುದರಿಂದ ಈ ನಾಮಕರಣವು ಯಥಾರ್ಥವಾಗಿ ಎಲ್ಲರಿಗೂ ಸಮ್ಮತವಾದುದರಲ್ಲಿ ಸೋಜಿಗವೇನು? ಶುಕ್ಲ

ಪಕ್ಷದ ಚಂದ್ರನಂತೆ ವಾಸುದೇವನು ದಿನದಿನಕ್ಕೆ ಬೆಳೆಯುತ್ತ ಎಲ್ಲರನ್ನು ಸಂತೋಷಸಾಗರದಲ್ಲಿ ಮುಳುಗಿಸುತ್ತಿದನು ಮೂರು ತಿಂಗಳು ಮುಗಿಯುವ ಹೊತ್ತಿಗೆ ಬಾಣಂತಿಯು ಗುಡಿಗೆ ಹೋಗಿ ತಪಸ್ಸಿನ ಫಲವನ್ನು ದೇವರಿಗೆ ಅರ್ಪಿಸುವ ಮುಹೂರ್ತವೂ ನಿಶ್ಚಿತವಾಯಿತು ಹಾಗೆ ಎಲ್ಲರೂ ಕೂಡಿಕೊಂಡು ಉಡುಪಿಗೆ ಬಂದು ಕುಲಸ್ವಾಮಿಯಾದ ಅನಂತೇಶನಿಗೆ ವಾಸುದೇವನನ್ನು ಕಾಣಿಕೆಯಾಗಿ ಅರ್ಪಿಸಿದರು ಸಾಯಂಕಾಲಕ್ಕೆ ತಮ್ಮ ಹಳ್ಳಿಗೆ ತಿರಿಗಿ ಬರಬೇಕೆಂದು ಹೊರಟರು ಸ್ವಲ್ಪ ರಾತ್ರಿಯಾಯಿತು. ಹೆಣ್ಣುಮಕ್ಕಳೊಂದಿಗೆ ಹೊರಡುವದರಲ್ಲಿ ಯಾವಾಗಲೂ ವಿಳಂಬವಾಗುವದು ಸಹಜ ಅಂತೂ ಭಟ್ಟರು ಬಾಂಧವರೊಂದಿಗೆ ಊರಿಗೆ ಹೊರಟರು. ನಟ್ಟಡಿವೆ; ಕೆಟ್ಟ ಕಾನನ. ಕಿರ್ರೆಂಬ ಜಾಡುಪು ಕತ್ತಲೆಗವಿದಿದೆ, ಭೂತಸಂಚಾರ ಕಾಲ. ಇಂಥ ಕಾಲವು ಘೋರನ ಧೈರ್ಯವನ್ನು ಕುಂದಿಸದಿರದು. ಆದರೆ ಭಗವದ್ಭಕ್ತರಿಗೆ ಏತರ ಅಂಜಿಕೆ? ಹಾಗೆಯೇ ಇವರು ಮುಂದೆ ಸಾಗುತ್ತಿರುವರು. ಅಷ್ಟರಲ್ಲಿ ಅವರಲ್ಲೊಬ್ಬನಲ್ಲಿ ಭೂತ ಸಂಚಾರವಾಯಿತು. ಅವನು ರಕ್ಕಸಾರಲು ಆರಂಭಿಸಿದನು. ಇದನ್ನು ನೋಡಿ ಎಲ್ಲರಿಗೂ ಕೂಸಿನ ಚಿಂತೆ; ಬಲಿಷ್ಟರನ್ನೇ ಬಾಧಿಸುವ ಭೂತವು ಮಗುವಿಗೆ ಏನು ಮಾಡಬಹುದೋ ಎಂಬ ಭೀತಿ! ಎಲ್ಲರ ಬಾಯಾರಿ ಹೋಗಿದೆ ಮೊಗದ ಮೇಲೆ ಕಳೆಯಿಲ್ಲ ಭಟ್ಟರು ದೇವರನ್ನು ನೆನಿಸಿ ನೃಸಿಂಹ ಮಂತ್ರದ ಜಪವನ್ನು ಪ್ರಾರಂಭಿಸಿದರು. ಈ ವರೆಗೆ ಭೂತವು ಮಗುವಿನ ಗೊಡವೆಗೆ ಹೇಗೆ ಬರಲಿಲ್ಲವೆಂದು ಎಲ್ಲರಲ್ಲಿ ಸೋಜಿಗವೂ ಉಂಟಾಗಿದೆ ಇಷ್ಟರೊಳಗೆ ಅವರೊಳಗಿನ ಮನುಷ್ಯನಲ್ಲಿ ಹೊಕ್ಕ ಭೂತವು ಮರುಳರೇ ವಾಯುದೇವರ ನಾಮ ಸ್ಮರಣ ಮಾತ್ರದಿಂದ ಮನುಷ್ಯನಲ್ಲಿ ಸೇರಿದ ಮಹಾಭೂತಗಳು ಓಡಿ ಹೋಗುವವು. ಈ ಮಗುವಂತೂ ಸಾಕ್ಷಾತ್ ವಾಯುವೇ, ಇದನ್ನು ಬಾಧಿಸುವ ಸಾಮರ್ಥ್ಯವು ಯಾವ ಭೂತನಲ್ಲದೆ? ಎಂದು ಹೇಳಿತು ಇದನ್ನೆಲ್ಲ ಕೇಳುತ್ತಿದ್ದ ಆ ಜನರಿಗೆ ಬಹಳ ಆಶ್ಚರ್ಯವಾಯಿತು. ಭಟ್ಟರಿಗೆ ದೇವರಲ್ಲಿ ಭಕ್ತಿಯೂ ಮಗುವಿನಲ್ಲಿ ಪ್ರೀತಿಯೂ ಹೆಚ್ಚಾದವು.

## ಬಾಲ್ಯ.

ಕಾರ್ಯಾವತಾರಿಯಾದ ವಾಯುದೇವರು ವಾಸುದೇವ ಸ್ವರೂಪದಲ್ಲಿ ಅನೇಕ ಬಾಲಲೀಲೆಗಳ ಅನುಕರಣ ಮಾಡುತ್ತ ಅಂಬೇಗಾಲು, ಎದ್ದು ನಿಲ್ಲುವದು, ತಪ್ಪುಹೆಜ್ಜೆ ಹಾಕುವದು ಮೊದಲಾದ ಒಂದೊಂದೇ ಲೀಲೆಗಳಿಂದ ತಾಯಿತಂದೆಗಳನ್ನಷ್ಟೇ ಅಲ್ಲದೆ, ಊರಿನ ಜನತೆಗೂ ಆನಂದವನ್ನುಂಟು ಮಾಡುತ್ತಿರುವರು. ಮಲ್ಲಿಗೆಯನ್ನು ಮುಚ್ಚಿಟ್ಟರೆ ಸುಗಂಧವು ಬಚ್ಚುವದೆ? ಒಂದು ದಿನ ವೇದವತಿಯು ಮಗುವಿಗೆ ಹೊಟ್ಟೆಗೆ ಕೊಟ್ಟು ತೊಟ್ಟಿಲಲ್ಲಿ ಮಲಗಿಸಿ ಎರಡನೆಯವರ ಮನೆಗೆ ಕೆಲಸಕ್ಕಾಗಿ ಹೋಗಿರುವಳು ಆಗ ಮನೆಯಲ್ಲಿ ಹಿರಿಯ ಮಗಳು ಮಾತ್ರ ಇದ್ದಳು. ಸ್ವಲ್ಪ ಹೊತ್ತಿನಲ್ಲಿಯೇ ಕೂಸು ಎಚ್ಚತ್ತು ಅಳಹತ್ತಿತು. ಅವಳು ಬಗಲಲ್ಲಿ ಕರಕೊಂಡು ಆಡಿಸಿದಳು, ಲಾಲಿಸಿದಳು, ಆದರೂ ಮಗುವಿನ ಕೂಗು ಹೆಚ್ಚಾಯಿತು ಸಮಾಧಾನಪಡಿಸಲು ಅಸಮರ್ಥಳಾದಳು. ಮುಂದೆ ನು ಮಾಡಬೇಕೆಂಬದು ತಿಳಿಯದಾಯಿತು ಆಕಳಿಗಾಗಿ ಅಲ್ಲಿಯೇ ಹುರಳಿಯನ್ನು ಕುದಿಸಿ ಇಟ್ಟದ್ದು ಅವಳ ಕಣ್ಣಿಗೆ ಬಿತ್ತು. ಅದರಲ್ಲಿಯ ಒಂದೇ ಕಾಳನ್ನು ತೆಗೆದು ಕೂಸಿನ ಬಾಯಿಯಲ್ಲಿ ಹಾಕಿದಳು. ಮಗುವು ಅಷ್ಟಕ್ಕೇ ಸುಮ್ಮನಾಗಿ ಕಾಳನ್ನು ಕಚ್ಚಿತು. ತಿಂದಿತು. ಮತ್ತೆ ಅಳುವು ಪ್ರಾರಂಭವಾಯಿತು ಮತ್ತೆರಡು ಕಾಳು ಹಾಕಿದಳು ಹೀಗೆ ಕುದಿಸಿಟ್ಟ ಹುರುಳಿ ಎಲ್ಲ ತೀರಿತು ಕೂಸು ಸುಮ್ಮನಾಗಿ ಆಡಹತ್ತಿತು ಮಗಳ ಚಿಂತೆ ತಪ್ಪಿತು ಇಷ್ಟರಲ್ಲಿ ವೇದವತೀದೇವಿಗೆ ಮಗುವಿನ ನೆನವಾಗಿದೆ ಕೂಸಿನ ಕಡೆಗೆ ದುರ್ಲಕ್ಷವಾದುದಕ್ಕೆ ತನ್ನನ್ನು ತಾನೇ ಹಳಿದುಕೊಂಡು ಗಡಬಡಿಸಿ ಮನೆಗೆ ಬಂದಳು. ನೆಟ್ಟಗೆ ತೊಟ್ಟಿಲಕ್ಕೆ ಹೋಗಿ ನೋಡುವಷ್ಟರಲ್ಲಿ ಕೂಸು ಆಡುತ್ತ ಮಲಗಿದೆ. ತಾಯಿಯನ್ನು ನೋಡಿದೊಡನೆ ಅದು ನಕ್ಕಿತು. ಕೈಗಳನ್ನು ಮೇಲಕ್ಕೆತ್ತಿ ಎತ್ತಿಕೊಳ್ಳಲು ಸೂಚಿಸಿತು. ಕೂಡಲೆ ಅವಳೂ ಹರ್ಷನಿರ್ಭರದಿಂದೆತ್ತಿ ಎದೆಗೆ ಅವಚಿದಳು, ಮುದ್ದಿಟ್ಟಳು. ಮೊಲೆಗೊಡುತ್ತ ಮಗಳನ್ನು ಕರೆದು ಕೂಸು ಅತ್ತಿತ್ತೇ ಎಂದು ಕೇಳಿದಳು. ಅವಳು ನಡೆದುದನ್ನೆಲ್ಲ ಹೇಳಿದಳು. ಕೂಡಲೆ ತಾಯಿಯು ಗಾಬರಿಯಾದಳು. ಮಗಳನ್ನು

ಕಿಡಿಕಿಡಿಯಾಗಿ ಕಂಡಳು ಯಜಮಾನರಿಗೆ ತಿಳಿಸಿದಳು ಎಲ್ಲರೂ ಚಿಂತಾತುರರಾದರು. ೭-೮ ತಿಂಗಳ ಕೂಸು ಅಷ್ಟೊಂದು ಹುರಳಿಯನ್ನು ತಿಂದುದೇ ಅವರಿಗೆ ಅರಿದು. ಕೂಸಿಗೇನಾಗುವದೋ ಎಂದು ಭಯ. ಕೂಡಲೆ ಭೀಮನಾಮಸ್ಮರಣೆ ನಡೆಯಿತು ಕೂಸಿನ ಹೊಟ್ಟೆಯ ಮೇಲೆ ಕೈಯಾಡಿಸಿದರು. ಇವರೆಲ್ಲರ ಕೃತಿಗಳನ್ನು ನೋಡಿ ಕೂಸು ನಗುತ್ತಲೇ ಇತ್ತು.

ಮಗುವು ದೊಡ್ಡದಾಗಲು ತಾಯಿಯ ಹಾಲು ಸಾಲದಾದವು. ಮುಂದೇನೆಂದು ಭಟ್ಟರು ವಿಚಾರ ಮಾಡುವಷ್ಟರಲ್ಲಿಯೇ ಪೂರ್ವಾಲಯ ಭಟ್ಟರೆಂಬ ನೆರೆಮನೆಯವರು (ಮೂಡಲ ಮನೆಯವರು) ಇವರಿಗೊಂದು ಆಕಳನ್ನು ಕೊಟ್ಟು ಸತ್ಪಾತ್ರ ದಾನಫಲದಿಂದ ಮುಕ್ತಿಯನ್ನು ಪಡೆದರು. ವಾಸುದೇವನು ಈ ಆಕಳೊಂದಿಗೆ ಆಟವನ್ನು ಆಡುತ್ತಿದ್ದನು ಈ ಆಕಳಲ್ಲಿಯೇ ದೇವೇಂದ್ರನು ಹುಟ್ಟುವನೆಂಬುದು ಅವನಿಗೇ ಗೊತ್ತಲ್ಲದೆ ಬೇರೆಯವರಿಗೇನು ಗೊತ್ತು? ಮನೆಯಲ್ಲಿ ದನಕರುಗಳು ವಿಶೇಷವಿಲ್ಲದಿದ್ದರೂ ತಕ್ಕಮಟ್ಟಿಗೆ ಇದ್ದವೆನ್ನಬಹುದು. ಒಂದು ದಿನ ಮುಂಜಾವಿನಲ್ಲಿ ದನಗಳು ಅಡವಿಗೆ ಹೊರಟಿವೆ. ವಾಸುದೇವನು ಒಂದು ಹೋರಿಯ ಬಾಲಕ್ಕೆ ಜೋತುಬಿದ್ದು ಅಡವಿಗೆ ಹೊರಟನು. ಮನೆಯವರಾರೂ ನೋಡದೆ ಹೋದರು. ಮುಂದೆ ಕೆಲ ಹೊತ್ತಿನಲ್ಲಿ ತಾಯಿಗೆ ವಾಸುದೇವನ ಸ್ಮರಣೆಯಾಗಿದೆ ಹುಡುಕಿದಳು; ಸಿಗಲಿಲ್ಲ. ಈ ಸುದ್ದಿಯು ಕ್ಷಣದಲ್ಲಿಯೇ ಊರಲ್ಲೆಲ್ಲ ಹಬ್ಬಿತು. ಎಲ್ಲರೂ ತಾಯಿಗೇ ಅನ್ನುವವರು!! ಏನಂದರೇನು? ವಾಸುದೇವನ ದರ್ಶನವಿಲ್ಲ! ಆ ದಿನ ಊರಲ್ಲಿ ಯಾರೂ ಊಟ ಮಾಡಲಿಲ್ಲ. ಎಲ್ಲರೂ ಲಗುಬಗೆಯಿಂದ ಹುಡುಕಾಡಲು ಪ್ರಾರಂಭಿಸಿದ್ದಾರೆ ಹೋರಿಯ ಬಾಲವನ್ನು ಹಿಡಿದುಕೊಂಡು ಜೋತುಬಿದ್ದ ಒಂದು ಕೂಸು ಅಡವಿಗೆ ಸಾಗಿದ್ದನ್ನು ದನಗಾವಿಯೋರ್ವನು ಹೇಳಿದನು ಅದು ಆಗ ಯಾರಿಗೂ ನಿಜವೆನಿಸಲಿಲ್ಲ ಕೂಸು ಹಾಗೆ ಅಡವಿಗೆ ಹೋಗುವದುಂಟೇ ಎಂಬುದೇ ಎಲ್ಲರ ಸಂದೇಹ. ಹೀಗೆ ಹುಡುಕುವದರಲ್ಲಿಯೇ ಸಂಜೆಯಾಯಿತು ದನಗಳು ಮನೆಗೆ ಬಂದು ಸೇರಲಾರಂಭಿಸಿದವು. ಆ ಹಿಂಡಿನಲ್ಲಿಯೇ ಹೋರಿಯೂ ಬಂತು. ಅದರ ಬಾಲವನ್ನು



ಋಣವಿಮೋಚನೆ

ಹಿಡಿದುಕೊಂಡು ವಾಸುದೇವನೂ ಬಂದನು ಮೊಗವು ಕಳೆಗುಂದಿಲ್ಲ, ಬಾಡಿಲ್ಲ, ಮಾಸಿಲ್ಲ; ಮಗುವು ಮಂದಹಾಸದಿಂದ ನಗುತ್ತಿರುವದು. ಇದನ್ನು ನೋಡಿ ಕೂಸು ಹಸಿವೆ ನೀರಡಿಕೆಗಳನ್ನು ಹೇಗೆ ಸಹಿಸಿತು? ಹೋರಿಯಿಂದ ಮಗುವಿಗೆ ಅಪಾಯವೇನೂ ಹೇಗಾಗಲಿಲ್ಲ? ಎಂಬುದಾಗಿ ಎಲ್ಲರೂ ಆಶ್ಚರ್ಯಗೊಂಡರು ವೇದವತಿಯೂ ಭಟ್ಟರೂ ಕಳಕೊಂಡ ರತ್ನವನ್ನು ಮತ್ತೆ ಹೊಂದಿ ಸಂತುಷ್ಟರಾಗಿ ಮಗುವನ್ನು ಬೆದರಿಸಿದರು; ಎಲ್ಲಿಗೆ ಹೋಗಿದ್ದೆ ಎಂದು ಕೇಳಿದರು ಮಗುವು ನಗುತ್ತ ತೊದಲು ನುಡಿಯಲ್ಲಿ ಏನೇನೋ ಹೇಳಿತು ಅದರ ಅರ್ಥವಾರಿಗೂ ಆಗಲಿಲ್ಲ. ಆದರೂ ಮಗು ಮಾತನಾಡಿತೆಂಬ ಆನಂದದಲ್ಲಿ ಅದರ ಅರ್ಥ ಮಾಡುವ ಗೊಡವಿಗೆ ಯಾರೂ ಹೋಗಲೇ ಇಲ್ಲ ಮಕ್ಕಳ ತೊದಲು ನುಡಿಗಳ ಅರ್ಥವನ್ನು ಮನಬಂದಂತೆ ಮಾಡುವ ಭಾಗ್ಯವಂತರಿಗೆ ಇದಕ್ಕೇನು ಹೇಳುವ ಕಾರಣವೇ ಇಲ್ಲ.

ಭಗವದ್ಭಕ್ತರಿಗೆ ದಾರಿದ್ರ್ಯವು ತಪ್ಪಿದ್ದಲ್ಲ. ಭಕ್ತರ ಮನೆಯೋ ದಾರಿದ್ರ್ಯದ ತವರೂರು ಸರಿಯೋ? ಭಟ್ಟರು ಇದಕ್ಕೆ ಅಪವಾದವಾಗುವದು ಹೇಗೆ? ಇವರಿಗೂ ಕಾಲವು ವಿಪರೀತವಾಗಿತ್ತು. ಧನಿಕರ ಕಾಟವು ದಿನಾಲು ಇದ್ದೇ ಇತ್ತು. ಒಂದು ದಿನ ಮಧ್ಯಾಹ್ನ. ಸ್ನಾನದ ಹೊತ್ತಾಗಿದೆ. ಧನಿಕನು ಮನೆಯ ಬಾಗಿಲಲ್ಲಿ ಕುಳಿತು ಭಟ್ಟರನ್ನು ತರುಬಿದನು ಈ ದಿನವೇ ತನ್ನ ಹಣವನ್ನೆಲ್ಲ ಕೊಟ್ಟು ಹೋಗಿರೆಂದನು. ತಂದೆಯನ್ನು ಸ್ನಾನಕ್ಕೆ ಕರೆಯಬಂದ ವಾಸುದೇವನು ಇದನ್ನೆಲ್ಲ ನೋಡಿ ಮನದಲ್ಲಿ ಮರುಗಿದನು. ಮನೆಯೊಳಕ್ಕೆ ಹೊಕ್ಕು ಒಂದು ಮುಷ್ಟಿ ಹುಣಸೇವಕ್ಕೆಗಳನ್ನು ತಂದು ಧನಿಕನ ಉಡಿಯಲ್ಲಿ ಹಾಕಿದನು. ಧನಿಕನು ಏನೆಂದು ನೋಡಲಾಗಿ ಅವು ಸುವರ್ಣ ನಾಣ್ಯಗಳು. ತನ್ನ ಲೆಕ್ಕಕ್ಕೆ ಸರಿಯಾಗಿದ್ದವು. ಧನಿಕನಿಗೂ ವಾಸುದೇವನ ಪ್ರಭಾವವೂ ಯೋಗ್ಯತೆಯೂ ಹೊಳೆಯದಿರಲಿಲ್ಲ ಆತ್ಮಜ್ಞಾನವಾಯಿತು. ಜ್ಞಾನವಾದ ಮೇಲೆ ಮುಕ್ತಿಯು ದೂರುಂಟೇ?

ಪಾಜಕಾಕ್ಷೇತ್ರಕ್ಕೆ ಸ್ವಲ್ಪೇ ದೂರದಲ್ಲಿ ನೇಯುಪಳ್ಳಿ=ನಡುಪೇಟೆಯೆಂಬುದೊಂದು ಹಳ್ಳಿ. ಅಲ್ಲಿ ಭಟ್ಟರ ಬಳಗದವರ ಮನೆಯಲ್ಲಿ ಮದುವೆಯ ಸಮಾರಂಭ ನಡೆದಿದೆ ಭಟ್ಟರೂ ಮನೆಯವರೊಂದಿಗೆ ಹೋಗಿರುವರು. ಮದುವೆಯಲ್ಲಿ ಹೆಂಗಸರ ವೈಭವವನ್ನು ಕೇಳಬೇಕೆ? ವೇದವತಿಯೂ ಮದುವೆಯ ಮನೆಗೆಲಸಗಳಲ್ಲಿ ಮುಳುಗಿರುವಳು. ವಾಸುದೇವನು ಇದನ್ನೆಲ್ಲ ನೋಡಿದನು. ತನ್ನನ್ನೇ ಮರೆತವರ ಬಳಿಯಲ್ಲಿ ತನ್ನದೇನು ಕೆಲಸವೆಂದು ಆಲೋಚಿಸಿದನು. ತನ್ನ ಸ್ವಾಮಿಯ ದರ್ಶನಕ್ಕೆಂದು ಹೊರಟನು ಉಡುಪಿಗೆ. ಹಿರಿಯರಾರೂ ಸಂಗಡ ಇಲ್ಲದ ಈ ಮೂರು ವರ್ಷದ ವಾಸುದೇವನನ್ನು ಕಂಡು 'ಮಗೂ ಎಲ್ಲಿಗೆ ಹೋಗುವೆ? ನಿನ್ನ ಜೊತೆಗೆ ಯಾರು?'' ಎಂದು ಮೊದಲಾಗಿ ದಾರಿಯಲ್ಲಿ ಜನರು ಕೇಳಿದರು ಅದಕ್ಕೆಲ್ಲ ವಾಸುದೇವನು ಮುಗುಳನಗೆಯಿಂದಲೇ ಉತ್ತರಕೊಡುತ್ತ ಮುಂದೆ ನಡೆದನು. ದಾರಿಯಲ್ಲಿ ಕುಡುವರೇಶ (ನಡು ಅಡಿವೆಯ ದೇವ) ನಿಗೆ ನಮಸ್ಕಾರ ಮಾಡಿ ತಾಳೀಕುಡೆ (ಸಣ್ಣ ಟೆಂಗಿನಕಾಯಿ, ಲಘುನಾರಿಕೇಲಿ) ಎಂಬ ಊರಲ್ಲಿ ಉಮಾಪತಿಗೆ ವಂದಿಸಿ ಅಲ್ಲಿಂದ ನೆಟ್ಟಗೆ ಉಡುಪಿಗೆ ಬಂದು ಪೂರ್ವದಿಕ್ಕಿನಲ್ಲಿದ್ದ ದೇವನಿಗೆ ಅಭಿನಮಿಸಿ ಅನಂತೇಶ್ವರನ ಗುಡಿಯಲ್ಲಿ ಹೊಕ್ಕು ಸ್ವಾಮಿಗೆ ಸಾಷ್ಟಾಂಗ ನಮಸ್ಕಾರಮಾಡಿದನು. ಸಣ್ಣ ಮಗುವು ಹೀಗೆ ನಮಸ್ಕರಿಸುವದನ್ನು ಕಂಡು ಅಲ್ಲಿ ಕೂಡಿದ ಜನರೆಲ್ಲ ಬೆರಗಾದರು. ಇಷ್ಟರಲ್ಲಿ ಮಧ್ಯಗೇಹಭಟ್ಟರು ತಾವಿದ್ದಲ್ಲಿ ಮಗನ ಸುಳಿವು ತೋರದೆ ಹುಡುಕುತ್ತ ಅಲ್ಲಿಗೇ ಬಂದು ಮಗನನ್ನು ಕಂಡು, ತುಸು ಸಿಟ್ಟಿನಿಂದ ಕೇಳಿದರು. ಮಗೂ ನಿಜವಾಗಿ ಹೇಳು. ಈ ಕಟ್ಟಡವಿಯಲ್ಲಿ ನಿನಗೆ ಜೊತೆಗಾರರಾರಿದ್ದರು? ನಿನಗೆ ಭಯವಾಗಲಿಲ್ಲವೇ?" ಎಂದು ಭಟ್ಟರ ಮಾತಿಗೆ ವಾಸುದೇವನು ಹೆದರಲಿಲ್ಲ. ತಂದೆಯನ್ನು ವಾತ್ಸಲ್ಯಪೂರ್ಣ ದೃಷ್ಟಿಯಿಂದ ನೋಡಿ, "ನಾನು ಮನೆಬಿಟ್ಟು ಹೊರಟೊಡನೆ ನನ್ನ ಜೊತೆಯಲ್ಲಿ ಆ ಕುಡುವರೇಶನು (ಕಾನನೇಶ್ವರನು) ಇದ್ದನು. ಅಲ್ಲಿಂದ ಮುಂದೆ ಒಂದೆ. ಆ ಕಾಲಕ್ಕೆ ತಾಳೀಕುಡೇಶನು ("ಲಘುನಾರಿಕೇಲೀಶ್ವರನು") ಸಂಗಡ ಬಂದನು. ಇಲ್ಲಿಗೆ ಬರುವಾಗ ಅನಂತೇಶ್ವರನೇ ನನ್ನನ್ನು ರಕ್ಷಿಸಿ

ದನು." ಎಂದು ಹೇಳಿದನು. ಇದನ್ನು ಕೇಳುತ್ತ ನಿಂತ ಜನಸಮೂಹವು ಅಚ್ಚರೆಯಿಂದ ಬೊಟ್ಟು ಕಚ್ಚಿತು. ಏನಪ್ಪಾ ಈ ಹುಡುಗನ ಬುದ್ಧಿ? ೪ ವರ್ಷದವನಿದ್ದರೂ ಜಾಣರಿಗೂ ಸಲ್ಲದ ಉತ್ತರ ಕೊಟ್ಟನು! ಎಂದು ಹೊಗಳಿದರು. ಹಲವರು ಭಟ್ಟರ ಪುಣ್ಯಫಲವೆಂದು ಸಂತೋಷಬಟ್ಟರು. "ವಿಮಾನಗಿರಿ'ಯಲ್ಲಿದ್ದ ದುರ್ಗಾದೇವಿಯೇ ಇವನನ್ನು ರಕ್ಷಿಸಿದಳೆಂದು ಭಟ್ಟರು ಅವಳನ್ನು ವಂದಿಸಿದರು. ನಾಲ್ಕೇ ವರ್ಷ ವಯಸ್ಸಿನ ಈ ಅದ್ಭುತ ಬುದ್ಧಿಯನ್ನೂ ಅಗಾಧ ಭಗವನ್ನಿಷ್ಠೆಯನ್ನೂ ಕಂಡು ಜನರೆಲ್ಲ ಬೆರಗಾದರು. ಮಧ್ಯಗೇಹಭಟ್ಟರು ಈತನಿಗೆ ಬೇಗನೆ ವಿದ್ಯಾಭ್ಯಾಸ ಮಾಡಿಸಬೇಕೆಂದು ಯೋಚಿಸಿ ಅಕ್ಷರಗಳನ್ನು ಬರೆದು ಕೊಟ್ಟು ತೀಡೆಂದು ಹೇಳಿದರು. ಮರುದಿನವೂ ಅವೇ ಅಕ್ಷರಗಳನ್ನು ಬರೆದುಕೊಡಲು ವಾಸುದೇವನು "ಇವೇಕೆ? ನಿನ್ನೆ ಬರೆದ ಅಕ್ಷರಗಳೇ ಇವತ್ತು ಮತ್ತೆ?" ಎಂದು ಕೇಳಿದನು. ಇದನ್ನು ಕೇಳಿದ ತಂದೆಗೆ ಹೆಚ್ಚಿನ ಅಚ್ಚರೆಯಾಯಿತು. ಎರಡೇ ದಿನಗಳಲ್ಲಿ ವಾಸುದೇವನು ಅಕ್ಷರಗಳನ್ನೆಲ್ಲ ಕಲಿತನು. ಇಷ್ಟರಲ್ಲಿ ಭಟ್ಟರ ಬಳಗದವರು ಅವರನ್ನು "ತುಪ್ಪದ ಬಳ್ಳಿ" ಎಂಬ ಊರಿಗೆ ಉತ್ಸವಕ್ಕಾಗಿ ಕರೆಯಿಸಿದರು. ಅಲ್ಲಿಗೆ ವಾಸುದೇವನೂ ಭಟ್ಟರ ಜೊತೆಯಲ್ಲಿ ಹೋಗಿದ್ದನು. ದೇವಾಲಯ ಒಂದರಲ್ಲಿ ಶಿವಭಟ್ಟರೆಂಬ ಪುರಾಣಿಕರೋರ್ವರು ಪುರಾಣ ಹೇಳುತ್ತಿರುವರು. ವೇದವತೀ ದೇವಿಯು ಮಗನೊಂದಿಗೆ ಅಲ್ಲಿಗೆ ಹೋಗಿದ್ದಳು. ಪುರಾಣಿಕರು ಮಧ್ಯದಲ್ಲಿ ಕೆಲವು ಶ್ಲೋಕಗಳಿಗೆ ಅಪಾರ್ಥವನ್ನು ಹೇಳಿದರು. ಅದು ವಾಸುದೇವನಿಗೆ ತಿಳಿಯದಿರಲಿಲ್ಲ! ಕೂಡಲೆ ವಾಸುದೇವನು "ಅದು ಹಾಗಲ್ಲ" ಎಂದು ಹೇಳಿದನು. ಶಿವಭಟ್ಟರು ತಮ್ಮಷ್ಟಕ್ಕೇ ವಿಚಾರ ಮಾಡಿದರು ಅರ್ಥವು ಬಗೆಹರಿಯದೆ ಹೋಯಿತು. ಜನರು ನಿಜಾರ್ಥವನ್ನು ನೀನು ಹೇಳೆಂದು ವಾಸುದೇವನನ್ನು ಕೇಳಿದರು. ಕೂಡಲೆ ಅದರ ಅರ್ಥವನ್ನು ವಾಸುದೇವನು ಹೇಳಿದನು. ಜನರೆಲ್ಲ ಅಚ್ಚರಿಗೊಂಡರು. ಈತನೇನೋ ಅವತಾರ ಪುರುಷನೆಂದು ತಮ್ಮೊಳಗೆ ಆಡಿಕೊಂಡರು. ವಾಸುದೇವನು ಮನೆಗೆ ಬಂದು ನಡೆದ ಸುದ್ದಿಯನ್ನು ತಂದೆಯವ

ರಿಗೆ ಹೇಳಿ ಯಾವ ಅರ್ಥವು ನಿಜವೆಂದು ಕೇಳಲು ತಂದೆಯವರು ಆನಂದದಿಂದ ದೇವರನ್ನು ಸ್ಮರಿಸಿದರು. ಮತ್ತೊಂದು ದಿನ ಮಧ್ಯಗೇಹಭಟ್ಟರು ಪ್ರವಚನ ಹೇಳುವಾಗ "ಲಿಕುಚ" ಶಬ್ದದ ಅರ್ಥವು ಗೊತ್ತಾಗದೆ ಹೇಳುವದನ್ನು ಬಿಟ್ಟು ಮುಂದೆ ಸಾಗಿದರು. ಅವರ ಸಮೀಪದಲ್ಲಿಯೇ ಕುಳಿತ ವಾಸುದೇವನು ಅದನ್ನು ತಿಳಿಯದಿರಲಿಲ್ಲ. "ಲಿಕುಚ" ಶಬ್ದವನ್ನು ಬಿಟ್ಟಿರಿ; ಅದರ ಅರ್ಥವೇನೆಂದು ತಂದೆಯವರನ್ನು ಕೇಳಿಯೂ ಬಿಟ್ಟನು. ಭಟ್ಟರಿಗೂ ಆ ಶಬ್ದಾರ್ಥವು ಹೊಳೆಯಲಾರದೆ ಹೋಯಿತು. ಕೊನೆಗೂ ನೆನಪಾಗಲಿಲ್ಲ. ವಾಸುದೇವನು ಅದರರ್ಥವನ್ನು ಹೇಳಿದನು. ಇದರಿಂದ ಭಟ್ಟರಿಗೆ ವಿಷಾದವಾಗಲಿಲ್ಲ. ಹೆಚ್ಚಿನ ಸಂತೋಷವೇ ಆಯಿತು. "ಪುತ್ರಾದಿಚ್ಛೇತ್ ಪರಾಜಯಂ" ಎಂಬ ಮಾತೇನು ಸುಳ್ಳೇ ?

## ಉಪನಯನ.

ಮಗನಿಗೆ ವೇದೋಪನಿಷತ್ತುಗಳ ಅಭ್ಯಾಸ ಮಾಡಿಸಬೇಕೆಂಬ ವಿಚಾರವು ಭಟ್ಟರಲ್ಲಿ ತಲೆದೋರಿತು. ಕೂಡಲೆ ಮಗನ ಐದನೇ ವರ್ಷದಲ್ಲಿಯೇ ಉಪನಯನವನ್ನು ಜರುಗಿಸಿದರು. ಈಗಿನಂತೆ ಉಪನಯನವನ್ನು ಹೆಸರಿಗೆ ಮಾತ್ರ ಮಾಡದೆ, ತೋಟಂತಿಲ್ಲಾಯರೆಂಬ ಗುರುಗಳ ಹತ್ತರ ವಿದ್ಯಾಭ್ಯಾಸಕ್ಕೆ ವಾಸುದೇವನನ್ನು ಕಳುಹಿಸಿದರು. ಇಂದು ವಾಸುದೇವನು ಗುರುಕುಲವಾಸಿಯಾಗಿರುವನು. ಕೌಪೀನಧಾರಿಯಾಗಿ ಕೈಯಲ್ಲಿ ಸಮಿಧೆ ಹಿಡಿದು ಅಗ್ನಿಯ ಮುಂದೆ ನಿಂತು ಉಪಾಸನೆ ನಡಿಸಿರುವನು. ಸೂರ್ಯನಿಗೆ ನಮಸ್ಕಾರ ಹಾಕುತ್ತಿರುವನು. ಗುರುಗಳಿಗೆ ವಂದಿಸಿ ವೇದಪಠಣ ಮಾಡಲು ಪ್ರಾರಂಭಮಾಡಿದನು. ಮೂರುಲೋಕದ ಗುರುವು ಹೀಗೆ ಲೌಕಿಕ ಗುರುವನ್ನು ವಂದಿಸುವದೂ ವೇದಾಭಿಮಾನಿ ದೇವತೆಯ ಒಡೆಯನು ವೇದಗಳನ್ನು ಪಠಣಮಾಡುವದೂ ಜ್ಞಾನಿಗಳಿಗೆ ಹೇಗೊ ಹೇಗೋ ಅನಿಸಿತು. ಮನುಷ್ಯರಿಗೆ ಕೃತಿಯಿಂದ ಶಿಕ್ಷಣ ಕೊಡಬಯಸಿದ ವಾಸುದೇವವಟುವಿಗೆ ಇವುಗಳಲ್ಲಿ ವಿಶೇಷವೇನೂ ತೋರಲಿಲ್ಲ.

ವಾಸುದೇವನು ಪ್ರತಿನಿತ್ಯ ನಿಯಮದಿಂದ ಮಾಡುವ ಬ್ರಹ್ಮಕರ್ಮಗಳನ್ನೂ ಅಧ್ಯಯನದಲ್ಲಿ ಕಂಡುಬಂದ ಆತನ ಬುದ್ಧಿವೈಭವ

ವನ್ನೂ ನೋಡಿ ಗುರುಗಳು ತಾವು ಧನ್ಯರೆಂದು ತಿಳಿದುಕೊಂಡರು. ಹೀಗೆ ಭೂಲೋಕದಲ್ಲಿ ವಾಯುದೇವರು ವಾಸುದೇವನೆಂಬ ಹೆಸರಿನಿಂದ ನಡೆಸಿದ ಕಾರ್ಯಗಳು ತಮೋಗುಣಿಗಳಿಗೆ ಸಹನವಾಗಲಿಲ್ಲ. ಇವನ ಬುದ್ಧಿಯೂ ಜ್ಞಾನವೂ ಅವರಿಗೆ ಕಾಡುಗಿಚ್ಚಿನಂತೆ ಅಸಹನೀಯವಾದವು. ಇವನನ್ನು ನಾಶಮಾಡುವ ಇಚ್ಛೆಯಿಂದ ಒಂದು ಸರ್ಪವನ್ನು ತಂದು ಇವನ ಮುಂದೆ ಬಿಟ್ಟರು. ದುರ್ಯೋಧನಾದಿಗಳು ಭೀಮನನ್ನು ಕೊಲ್ಲಲು ನೀರಲ್ಲಿ ಮುಳುಗಿಸಲಿಲ್ಲವೆ? ವಿಷಗೊಡಲಿಲ್ಲವೆ? ಮೈಮೇಲೆ ಹಾವುಗಳನ್ನು ಬಿಡಲಿಲ್ಲವೆ? ಈಗಲೂ ಆರ್ಭಟಿಸಿ ಫೂತ್ಕಾರ ಮಾಡುತ್ತ ಬಂದ ಹಾವಿನ ಗತಿಯೂ ಹಾಗೆಯೇ ಆಯಿತು? ವಾಸುದೇವನ ಅಂಗುಷ್ಠವನ್ನು ಕಚ್ಚಲು ಬಂದ ಸರ್ಪವು ಅಂಗುಷ್ಠದ ಬುಡದಲ್ಲಿ ಸಿಕ್ಕು ತೊಳಲಾಡಿ ಒದ್ದಾಡಿ ಪ್ರಾಣಬಿಟ್ಟಿತು. ಸರ್ಪಸಂಹಾರವಾದ ಈ ಸ್ಥಾನವು ಇಂದಿಗೂ ಅಲ್ಲಿ ನೋಡಲು ದೊರೆಯುವದು. ವಾಸುದೇವನು ತನ್ನ ಸಹಪಾಠಿಗಳೊಂದಿಗೆ ಈಸುವನು, ಕುಸ್ತಿ ಹಿಡಿಯುವನು, ಜಿಗಿಯುವನು, ಹಾರುವನು, ಜಗ್ಗುವನು, ಮರ ಏರುವನು ಮೊದಲಾದ ಆಟಗಳಿಂದ ಹಿಂದಿನ ಅವತಾರಗಳಲ್ಲಿ ಮಾಡಿದ ಲೀಲೆಗಳನ್ನು ನೆನಪಿಗೆ ತಂದುಕೊಡುತ್ತಿದ್ದನು. ಹೀಗೆ ಚಂಡನಾಡುವ ಕಾಲಕ್ಕೊಮ್ಮೆ ಇವನು 'ಕಂದುಕ ಸ್ತುತಿ' ಯೆಂಬ ಗ್ರಂಥವೊಂದನ್ನು ಆಡಾಡುತ್ತ ರಚಿಸಿ ಸಮವಯಸ್ಕರನ್ನು ಬೆರಗುಗೊಳಿಸಿದನು ಇವನನ್ನು ಬಹು ಜಾಣನಾಗಿ ಮಾಡಬೇಕೆಂದು ಗುರುಗಳಿಗೆ ಬಲವಾದ ಅಭಿಲಾಷ. ಯಾವಾಗಲೂ ಅಧ್ಯಯನ ಮಾಡಲು ಅವರು ಹೇಳುತ್ತಿದ್ದರು. ಆದರೆ ವಾಸುದೇವನ ಲಕ್ಷ್ಯವೆಲ್ಲ ಆಟಗಳ ಕಡೆಗೆ. ಇದನ್ನು ನೋಡಿ ಗುರುಗಳಿಗೆ ಒಂದು ದಿನ ಸಿಟ್ಟು ಬಂತು. ವಾಸುದೇವನನ್ನು ಕರೆದು "ನೀನೇಕೆ ಪಾಠಮಾಡುವದಿಲ್ಲ" ಎಂದು ಬೆದರಿಸಿದರು "ನನಗೆ ಪಾಠಮಾಡುತ್ತ ಕೂಡಲು ಬೇಸರ" ಎಂದು ವಾಸುದೇವನು ಗುಣುಗುಟ್ಟಿದನು. ಕೂಡಲೆ "ನೀನು ಬಲು ಜಾಣ; ಅನ್ನು ನೋಡೋಣ ನಿನ್ನೆ ಹೇಳಿದ್ದನ್ನು" ಎಂದು ಗುರುಗಳು ಗದ್ದರಿಸಿದರು. ವಾಸುದೇವನು ಅವರೆದುರಿನಲ್ಲಿ ಕುಳಿತು ಹಿಂದೆ ಹೇಳಿದ್ದನ್ನು ಮುಂದೆ

ಹೇಳಬೇಕೆಂಬುವದನ್ನೂ ಎಲ್ಲವನ್ನೂ ಸ್ಪಷ್ಟವಾಗಿ ಅಂದನ್ನಲ್ಲದೆ, ಐತರೇಯೋಪನಿಷತ್ತಿನ ಅರ್ಥವನ್ನು ಕೂಡ ಗುರುಗಳಿಗೆ ಹೇಳಿದನು. ಹೀಗೆ ಗುರುಗಳು ಹಿಂದಿನಿಂದ ಏಕಾಂತದಲ್ಲಿ ಉಪನಿಷದ್ರಹಸ್ಯವನ್ನು ಕೇಳಿಕೊಂಡು ತಾವು ಮುಕ್ತರಾದುದಲ್ಲದೆ ತಾವು ಹುಟ್ಟಿಬಂದ "ಅಡಕೀ ತೋಟದವರ " (ತೋಟಂತಿಲ್ಲಾಯರ) ವಂಶವನ್ನೇ ಉದ್ಧಾರ ಮಾಡಿದರು. ವಾಸುದೇವನು ಒಂದು ದಿನ ಗೆಳೆಯರೊಂದಿಗೆ ಆಡುತ್ತಿರುವಾಗ ಅವನ ಗುರುಪುತ್ರನಿಗೆ ಅರೆತಲೆಶೂಲೆಯು ಎದ್ದಿತು ಹುಟ್ಟಿದಾರಭ್ಯ ಅವನಿಗೆ ಈ ರೋಗವು ಇತ್ತು. ವಾಸುದೇವನು ಆವನ ಕಿವಿಯಲ್ಲಿ ಊದಿ ಆತನ ತಲೆಶೂಲೆಯನ್ನು ಕಳೆದನು ಈ ರೀತಿಯಾಗಿ ಜಗತ್ತನ್ನೇ ಬೆರಗುಗೊಳಿಸುವ ವಾಸುದೇವನ ಲೀಲೆಗಳನ್ನು ಕಂಡು ದೇವತೆಗಳು ಆನಂದಬಟ್ಟರು. ಮತ್ತು ಆತನು ತಮ್ಮ ಕಾರ್ಯವನ್ನು ತೀವ್ರ ಕೈಕೊಳ್ಳಬೇಕೆಂದು ಆತುರರಾಗಿ ನಿರ್ಜನಪ್ರದೇಶದಲ್ಲಿ ಒಂದು ದಿನ ಆತನನ್ನು ಕಂಡು ತಮ್ಮ ಮನೋಗತವನ್ನೂ ತಿಳಿಸಿದರು. ವಾಸುದೇವನು ''ಹಾಗೇ ಆಗಲಿ'' ಎಂದು ಹೇಳಿ ಅವರನ್ನು ಸಂತೋಷಗೊಳಿಸಿದನು.

## ಸನ್ಯಾಸಸಂಕಲ್ಪ.

ಒಂದು ದಿನ ವಾಸುದೇವನೊಬ್ಬನೆ ಏಕಾಂತದಲ್ಲಿ ಕುಳಿತು ವಿಚಾರ ಮಾಡುತ್ತಿರುವನು. ದೇವತೆಗಳ ಬಯಕೆಯನ್ನು ಹೇಗೆ ಪೂರ್ಣ ಮಾಡಬೇಕೆಂಬದೇ ಅವನ ವಿಚಾರ ವಿಷಯ. ರಾಜದಂಡದಿಂದ ಧರ್ಮಪ್ರಸಾರ ಮಾಡುವದಕ್ಕಿಂತಲೂ ಜ್ಞಾನಮಾರ್ಗವೇ ಲೇಸೆಂದು ನಿರ್ಣಯಿಸಿದನು. ಜ್ಞಾನಮಾರ್ಗವು ಸಫಲವಾಗಬೇಕಾದರೆ ಸನ್ಯಾಸದ ಹೊರ್ತು ಬೇರೆ ದಾರಿಯಿಲ್ಲೆಂದು ನಿರ್ಧರಿಸಿದನು. ಹೀಗೆ ಜ್ಞಾನಮಾರ್ಗದ ಕಡೆಗೆ ಅಂತರದೃಷ್ಟಿಯು ಹೊರಳಿದೊಡನೆಯೇ ವಾಸುದೇವನಿಗೆ ಮನೆಯೊಳಗಿನ ಪ್ರತಿಯೊಂದು ವಸ್ತುವೂ ಪರಮಾತ್ಮ ರೂಪವೇ ಆಗಿ ಗೋಚರಿಸತೊಡಗಲು ಆತನು ಎಲ್ಲ ವಸ್ತುಗಳಿಗೂ ನಮಸ್ಕಾರ ಮಾಡಹತ್ತಿದನು. ತಂದೆತಾಯಿಗಳು ಹೀಗೇಕೆಂದು ಕೇಳಿದರೆ "ಅವು ನನ್ನ ವಸ್ತುಗಳು'' ಎಂದು ಹೇಳಿ ಅವರಿಗೂ ನಮಸ್ಕರಿಸಿದನು. ಅಂದೇ ಮಧ್ಯಾಹ್ನಕ್ಕೆ ವಾಸುದೇವನು ಮನೆಯಲ್ಲಿಲ್ಲ! ಮಧ್ಯಾ

ನ್ನದ ಊಟದ ಕಾಲಕ್ಕೆ ಹುಡುಕಿದರು. ಸಂಜೆಯವರೆಗೂ ದಾರೀ ನೋಡಿದರು. ವಾಸುದೇವನು ಮನೆಗೆ ಬರಲೇ ಇಲ್ಲ. ರಾತ್ರಿಯನ್ನೆಲ್ಲ ಹಾಗೇ ಭಟ್ಟರು ಚಿಂತೆಯಲ್ಲಿ ಕಳೆದರು. ಮರುದಿನ ಬರಬಹುದೆಂದು ಆಶೆಬಟ್ಟರು. ಅದೂ ವ್ಯರ್ಥವಾಯಿತು. "ಮಗನು ಹೋದನೆಲ್ಲಿ?" ಎಂದು ಎಲ್ಲರೂ ಹುಡುಕಿ ಬೇಸತ್ತರು. ಭಟ್ಟರು ಮಾತ್ರ ಹುಚ್ಚು ಹಿಡಿದವರಂತಾಗಿ ಮಗನನ್ನು ಹುಡುಕಲು ಹೊರಟೇಬಿಟ್ಟರು. ವಾಸು ದೇವನು ಗುರುಗಳನ್ನು ಹುಡುಕುತ್ತ ಹೊರಟಿದ್ದನು.

ಹಂಸನಾಮಕ ಪರಮಾತ್ಮನಿಂದ ಪ್ರಾರಂಭವಾದ ಪರಮಹಂಸ ಮಾರ್ಗವು ಇಂದಿಗೂ ಅವ್ಯಾಹತವಾಗಿ ನಡೆದು ಬಂದಿದೆ. ಆದರೆ ಆ ಪೀಠದಲ್ಲಿ ಸತ್ಯಜ್ಞಾನ ಪ್ರಕಾಶಮಾಡಲು ಮುಂದಾಗುವ ಸಮರ್ಥರು ಮಾತ್ರ ಯಾರೂ ಆಗಿದ್ದಿಲ್ಲ. ಆದುದರಿಂದ ಎಲ್ಲ ಕಡೆಗೂ ಅಜ್ಞಾನವು ಮುಸುಕಿ ಕತ್ತಲೆಗವಿದು ಅಂಧರಾದ ಜನರು ಜ್ಞಾನಸೂರ್ಯೋದಯವನ್ನು ಅಪೇಕ್ಷಿಸುತ್ತಿದ್ದರು. ಈ ಸಮಯದಲ್ಲಿ ಗುರುಪೀಠದ ಮೇಲೆ ಅಚ್ಯುತಪ್ರೇಕ್ಷಾಚಾರ್ಯರು ಇದ್ದರು. ಇವರೂ ಮಹಾನ್ ಜ್ಞಾನಿಗಳು. ಇವರು ಪೂರ್ವಜನ್ಮದಲ್ಲಿ ದ್ರೌಪದೀದೇವಿಯಿಂದ ಸಿದ್ಧವಾದ ಅನ್ನವನ್ನು ಮಧುಕರೀ ವೃತ್ತಿಯಿಂದ ಸಂಪಾದಿಸಿ ಉಣ್ಣುತ್ತಿದ್ದುದರಿಂದ ಇವರ ಆತ್ಮವು ಪರಿಶುದ್ಧವಾಗಿತ್ತು. ಇವರೇ ಈಗ ಪೀಠದ ಮೇಲಿದ್ದ ಸನ್ಯಾಸಿಗಳು. ಇವರ ಗುರುಗಳು ಪ್ರಾಜ್ಞತೀರ್ಥರು ವೃಂದಾವನಸ್ಥರಾಗುವ ಕಾಲಕ್ಕೆ ಇವರಿಗೆ ಕೆಲವು ಗುಟ್ಟಿನ ಮಾತುಗಳನ್ನು ಹೇಳಿದ್ದರು. "ಈಗ ನಾನೇ ಬ್ರಹ್ಮನೆಂಬ ಉಪಾಸನೆಯು ಎಲ್ಲ ಕಡೆಗೂ ಹಬ್ಬಿದೆ. ಆದರೆ ಇದರಲ್ಲಿ ತಥ್ಯವಿದೆಯೆಂದು ನನಗೆನಿಸುವದಿಲ್ಲ; ಅಲ್ಲದೆ ನಮ್ಮ ಪೂರ್ವಜರಾರೂ ಇದನ್ನು ಮನಗಂಡಿಲ್ಲ. ಆದುದರಿಂದ ನಿಜವಾದ ಜ್ಞಾನವಾಗಬೇಕೆಂದು ಮೋಕ್ಷದಾಯಕನಾದ ಶ್ರೀಮನ್ನಾರಾಯಣನನ್ನು ನೀನು ಭಜಿಸು. ಯೋಗ್ಯ ಜ್ಞಾನವನ್ನು ಹೊಂದು. ಈ ಮಾಯಾಶಾಸ್ತ್ರದಲ್ಲಿ ವಿಶ್ವಾಸವಿಡಬೇಡ." ಎಂಬುವೇ ಆ ರಹಸ್ಯ. ಅದಕ್ಕೇ ಅಚ್ಯುತಪ್ರೇಕ್ಷರಿಗೆ ಹೊಟ್ಟೆಯಲ್ಲಿ ತಳಮಳ. ಜ್ಞಾನದ ನೀರಡಿಕೆ ಹೆಚ್ಚಾಗಿದೆ. ಕಸವಿಸಿಯು ಹುಟ್ಟಿದೆ- ಇದಕ್ಕಾಗಿ ಉಡುಪಿ

ಯಲ್ಲಿಯು ಅನಂತೇಶ್ವರನ ಸೇವೆಮಾಡುತ್ತಿದ್ದರು. ಇವರಿಗೆ ಅನಂತೇಶ್ವರನು ನೀನು "ನಿನ್ನ ಶಿಷ್ಯನಿಂದ ಜ್ಞಾನವನ್ನು ಪಡೆಯುವಿ" ಎಂಬ ವರವನ್ನೂ ಕೊಟ್ಟಿದ್ದನು. ಅಚ್ಯುತಪ್ರೇಕ್ಷರು ಶಿಷ್ಯನ ದಾರಿಯನ್ನೇ ನೋಡುತ್ತಿದ್ದರು. ಅಲ್ಲಿಯೇ ವಾಸುದೇವನು ಬಂದು, ಕಾಯಿಯನ್ನಿಟ್ಟು ನಮಸ್ಕಾರ ಹಾಕಿದನು.

ಉಡುಪಿಯಲ್ಲಿ ವಾಸುದೇವನ ಪರಿಚಯವೆಲ್ಲರಿಗೂ ಇತ್ತು. ಮಧ್ಯಗೇಹಭಟ್ಟರಿಗೆ ಈ ಸುದ್ದಿ ಮುಟ್ಟಲು ತಡವಾಗಲಿಲ್ಲ. ಮಗನು ಸನ್ಯಾಸಿಯಾಗುವನೆಂದು ಕೇಳಿ ಅವರು ಕಿಡಿಕಿಡಿಯಾದರು. ನೆಟ್ಟಗೆ ಉಡುಪಿಗೆ ಬಂದು, ಮಠದಲ್ಲಿ ನೋಡಲಾಗಿ ಮಗನು ಸನ್ಯಾಸಿಗಳ ಸೇವೆಯಲ್ಲಿ ನಿರತನಾಗಿದ್ದಾನೆ. ಇದನ್ನು ಕಂಡು ಭಟ್ಟರ ಕೋಪವು ಮಿತಿಮೀರಿತು. ಮಗನ ಹತ್ತರ ಬಂದು "ಮಗು, ವಾಸುದೇವಾ, ನಾವು ನಿನ್ನ ತಾಯಿತಂದೆಗಳು ಮುಪ್ಪಿನಿಂದ ಸಾಯಲಾಗಿರಲು ನಿನಗೇಕೆ ಸನ್ಯಾಸ?" ಎಂದೆಂದು ಆತನಿಗೆ ಪ್ರಶ್ನೆ ಹಾಕಿ, ನಮಸ್ಕರಿಸಿದರು. ಆಗ ವಾಸುದೇವನು ತಾತನವರೇ ದೇವರು ತಾನಾಗಿಯೇ ಸನ್ಯಾಸ ಸ್ವೀಕಾರಕ್ಕೆ ನಿಮ್ಮಿಂದ ಅಪ್ಪಣೆಕೊಡಿಸಿದನೆನ್ನಬೇಕಲ್ಲವೇ? ಇಲ್ಲವಾದರೆ ಹಿರಿಯರು ಕಿರಿಯರಿಗೆ ನಮಸ್ಕರಿಸುವದು ಹೇಗೆ? ಎಂದು ಕೇಳಿದನು. ಭಟ್ಟರು ನಿರುತ್ತರರಾದರು. ಅವರು ಯತಿಶ್ರೇಷ್ಠರಾದ ಅಚ್ಯುತಪ್ರೇಕ್ಷರನ್ನು ಕಂಡು ಅಭಿವಂದಿಸಿ, ನಡೆದ ಸುದ್ದಿಯನ್ನೆಲ್ಲ ತಿಳಿಸಿ, ಮರಳಿ ಮನೆಗೆ ಬಂದರು. ಆದರೆ ಮನದಲ್ಲಿ ಸಮಾಧಾನವಿಲ್ಲ. ಮಗನ ಮೊಗವು ಕಣ್ಣುಮುಂದೆ ಕಟ್ಟಿತ್ತು. ದಂಪತಿಗಳಿಬ್ಬರೂ ದುಃಖದಿಂದ ಕಣ್ಣೀರು ಸುರಿಸುತ್ತಾರೆ. ಯಾವದೂ ಸೊಗಸಾಗಲೊಲ್ಲದು. ಮನೆಯಲ್ಲಿರಲು ಮನಸ್ಸೊಪ್ಪದೆ ಮತ್ತೆ ಯತಿಶ್ರೇಷ್ಠರಿರುವ ಕುತ್ತಾಡಿ ಮಠಕ್ಕೆ ಕುಂಜಾರು ಮಾರ್ಗವಾಗಿ ಭಟ್ಟರು ಬಂದರು. ಹೊಟ್ಟೆಯಲ್ಲಿ ಅಂತಃಕರಣದ ಕಿಚ್ಚು ಉರಿಯುತ್ತಿರುವದು. ಧಗಧಗಿಸುತ್ತಿರುವದು. ಮಗನನ್ನು ಕಂಡು ನೀನು ಲಂಗೋಟಿ ಹಾಕಿದರೆ ನಾನು ಆತ್ಮಘಾತ ಮಾಡಿಕೊಳ್ಳುವೆನು. ಎಂದು ಅಂದರು. ವಾಸುದೇವನ ನಿರ್ಧಾರವೇನೋ ಅಚಲವಾಗಿತ್ತು. ದೇಹವನ್ನು ಕಡಿಯಬೇಕೆಂದು ಮನ

ದಲ್ಲಿ ತಂದು ಕೊಡಲು ಆವನು ಒಂದನ್ನು ಹರಿದು ಲಂಗೋಟಿಯನ್ನು ಹಾಕಿಕೊಂಡು ನಿಂತನು. ಇದನ್ನು ಕಂಡು ಭಟ್ಟರು ಬಹಳೇ ವಿಷಣ್ಣರಾದರು. ಆಗ "ಶುಭಕಾರ್ಯಕ್ಕೆ ತಮ್ಮಂಥವರು ವಿಘ್ನ ಮಾಡುವದು ಉಚಿತವೆ?" ಎಂದು ವಾಸುದೇವನು ತಂದೆಯನ್ನು ಕೇಳಿದನು "ಇದು ನಿಜ. ಆದರೆ ತಂದೆತಾಯಿಗಳನ್ನು ರಕ್ಷಿಸುವದೇ ಮಗನ ಕರ್ತವ್ಯವಲ್ಲವೆ? ನಮಗಾರು ಸಂರಕ್ಷಕರು? ನಿನ್ನ ಅಣ್ಣಂದಿರು ಇಬ್ಬರೂ ಕೈಬಿಟ್ಟಿರುವರು. ನೀನೂ ಹೀಗೆ ಮಾಡಿದರೆ ನಮಗಾರು ಗತಿ?" ಎಂದು ಭಟ್ಟರು ಕಳಕಳತೆಯಿಂದ ಕೇಳಿದರು. ಇದಕ್ಕೆ ವಾಸುದೇವನು "ಪುರುಷನಿಗೆ ವಿರಕ್ತಿಯು ಹುಟ್ಟಿದ ಕೂಡಲೆ ಸನ್ಯಾಸಿಯಾಗಬೇಕೆಂದು ವೇದವಚನವಿಲ್ಲವೆ? ಆದರೂ ತಮ್ಮ ಸಂರಕ್ಷಣೆಕ್ಕೆ ಇನ್ನೊಬ್ಬನು ಹುಟ್ಟುವವರೆಗೆ ಆಶ್ರಮವನ್ನು ಸ್ವೀಕರಿಸುವದಿಲ್ಲ." ಎಂದು ಹೇಳಿದನು. ಭಟ್ಟರು ಇದಕ್ಕೇನು ಹೇಳಬೇಕೆಂಬುದನ್ನು ಅರಿಯದೆ "ನಾನೇನೋ ಒಪ್ಪಬಹುದು. ಆದರೆ ನಿನ್ನ ತಾಯಿಯು ಈ ನಿನ್ನ ಮಾತಿಗೆ ಒಪ್ಪಲಾರಳು. ಅವಳನ್ನು ದುಃಖಸಾಗರದಲ್ಲಿ ಮುಳುಗಿಸುವದು ಪುತ್ರಧರ್ಮಕ್ಕೆ ಯೋಗ್ಯವೆ?" ಎಂದು ಕೇಳಿದರು. ಕೂಡಲೆ ನಾನು ತಾಯಿಯ ಅಪ್ಪಣೆಯನ್ನು ಪಡೆಯುವೆನು ತಾವಂತೂ ಆಜ್ಞೆ ಕೊಡಬೇಕು. ಎಂದು ವಾಸುದೇವನು ಕೇಳಿದ್ದಕ್ಕೆ "ಹಾಗೇ ಆಗಲಿ" ಎಂದು ಭಟ್ಟರು ಉತ್ತರಕೊಡಬೇಕಾಯಿತು. ಮಧ್ಯಗೇಹಭಟ್ಟರು ಮನೆಗೆ ಬಂದು ವೇದವತಿಯ ಮುಂದೆ ನಡೆದ ಸುದ್ದಿಯನ್ನೆಲ್ಲ ಹೇಳಿದರು. ಮಗನಿಗೆ ಸನ್ಯಾಸಕ್ಕೆ ಅಪ್ಪಣೆ ಕೊಡಕೂಡದೆಂದೂ ಗಟ್ಟಿಮುಟ್ಟಿಯಾಗಿ ಹೇಳಿಟ್ಟರು.

## ಸನ್ಯಾಸ ಸ್ವೀಕಾರ.

ಮುಂದೆ ಕೆಲವು ದಿನಗಳು ಹೋಗಿವೆ. ವಾಸುದೇವನಿಗೆ ತಮ್ಮನೊಬ್ಬನು ಹುಟ್ಟಿದನು. ವಾಸುದೇವನು ಗುರುಶುಶ್ರೂಷೆಯಲ್ಲಿ ನಿರತನಾಗಿದ್ದರೂ ಇತ್ತ ಕಡೆಗೆ ಅವನ ಲಕ್ಷವಿತ್ತು. ಮನೆಗೆ ಬಂದು ತಾಯಿಗೆ ವಂದಿಸಿದನು. ತನಗೆ ಆಶ್ರಮ ಸ್ವೀಕಾರಕ್ಕೆ ಅಪ್ಪಣೆಯನ್ನೀಯಲು ಕೇಳಿದನು. ತಾಯಿಯು ಒಪ್ಪಲಿಲ್ಲ. ಆದರೆ ವಾಸುದೇ

ವನು ವಜ್ರನಿರ್ಧಾರದಿಂದ "ನನಗೆ ಆಶ್ರಮಕ್ಕೆ ಆಜ್ಞೆ ಕೊಟ್ಟರೆ ನೀನು ನೆನಿಸಿದ ಕೂಡಲೆ ನಾನು ನಿನ್ನ ಹತ್ತಿರ ಬರುವೆನು. ಇಲ್ಲಿವಾದರೆ ನಿಮ್ಮ ಕಣ್ಣಿಗೆ ಎಂದಿಗೂ ಕಾಣಿಸದಂತೆ ಎಲ್ಲಿಗಾದರೂ ಹೊರಟು ಹೋಗುವೆನು" ಎಂದು ನಿಷ್ಠುರವಾಗಿ ಹೇಳಿದನು. ಇದನ್ನು ಕೇಳಿ ತಾಯಿಗೂ ಚಿಂತೆಯಾಯಿತು. ಮುಂದೇನು ಮಾಡಬೇಕೆಂಬುದು ತೋಚದಾಯಿತು. "ಎಂದೂ ಕಾಣದಿರುವದು ಮರಣವಲ್ಲದೆ ಮತ್ತೇನು?" ಎಂದು ಮುಂತಾಗಿ ಆಲೋಚಿಸಿದಳು. ಯಾವುದೋ ಒಂದು ದೊಡ್ಡ ಕಾರ್ಯಕ್ಕಾಗಿ ಈ ಮಹಾತ್ಮನ ಜನ್ಮವಿದೆಯೆಂದೂ ಅರಿತಳು. ಇವನ ಬಾಲಲೀಲೆಯ ಮಹತ್ವದ ಪ್ರಸಂಗಗಳು ಕಣ್ಣು ಮುಂದೆ ಕಟ್ಟಿದವು. ಕೂಡಲೆ ವಾಸುದೇವನಿಗೆ ಸನ್ಯಾಸಾಶ್ರಮ ಸ್ವೀಕಾರಕ್ಕೆ ಅಪ್ಪಣೆ ಕೊಟ್ಟಳು. ತಂದೆತಾಯಿಗಳಿಗೆ ವಾಸುದೇವನು ಅಭಿವಂದಿಸಿ ಗುರುಗಳ ಹತ್ತಿರ ಬಂದು ಅದೇ ದಿನ ಅಂದರೆ ವಿಳಂಬಿ ಸಂವತ್ಸರ ಆಷಾಢ ವದ್ಯ ೪ ಶುಭ ದಿನದಲ್ಲಿ ಕಾಯಿಯನ್ನಿಟ್ಟು ವಂದಿಸಿ ಚತುರ್ಥಾಶ್ರಮವನ್ನು ಸ್ವೀಕರಿಸಿದನು.

ಇಂದು ವಾಸುದೇವನಿಗೆ ಅತ್ಯಂತ ಹರ್ಷವಾಗಿದೆ. ಅಚ್ಯುತಪ್ರೇಕ್ಷರಿಗೆ ತಮಗೆ ಉತ್ತಮ ಶಿಷ್ಯನು ದೊರೆತನೆಂದು ಹೆಚ್ಚಾಗಿ ಸಂತೋಷವಾಗಿದೆ. ಎದುರಿನಲ್ಲಿ ಕುಳ್ಳಿರಿಸಿಕೊಂಡು ಪ್ರಣವೋಪದೇಶವನ್ನು ಶಿಷ್ಯನಿಗೆ ಮಾಡಿ ಅವನ ಅಗಾಧಜ್ಞಾನವನ್ನನುಲಕ್ಷಿಸಿ "ಪೂರ್ಣಬೋಧ"ನೆಂಬ ಹೆಸರಿನ್ನಿಟ್ಟರು. ಪೂರ್ಣಬೋಧರು ಮೈಮೇಲೆ ಒಂದು ಲಂಗೋಟಿ ಕೈಯಲ್ಲಿ ದಂಡಕಾಷ್ಠ; ಭೂಷಣಗಳು ಮೈಮೇಲೆ ಯಾವವೂ ಇರಲಿಲ್ಲವಾದರೂ ಪೃಥ್ವಿಗೇ ಭೂಷಣರಾಗಿದ್ದರು. ಇವರ ಈ ಶೋಭೆಯನ್ನು ಕಂಡು ದೇವತೆಗಳೆಲ್ಲ ಬೆರಗಾದರು. ಭಾರತೀದೇವಿಯು ಮಾತ್ರ ನಾಚಿದಳು. ಕೊಂಚ ಕೋಪದಿಂದ ಇವರನ್ನು ನೋಡಿದಳು. ರುದ್ರೇಂದ್ರ ಚಂದ್ರಾದಿಗಳು ನಮಸ್ಕಾರಕ್ಕೆ ಬಂದಾಗ "ಅವಕಾಶವುಂಟೆ?" ಎಂದು ದ್ವಾರರಕ್ಷಕರನ್ನು ಕೇಳಿಕೊಂಡು, ಅಪ್ಪಣೆ ದೊರೆತ ಮೇಲೆ ಒಳಗೆ ಹೋಗಿ, ವಾಯುದೇವರಿಗೆ ನಮಸ್ಕಾರ ಮಾಡಬೇಕಾಗುವದು. ಅದೇ

ವಾಯುದೇವರು ಇಂದು ಪೂರ್ಣಬೋಧರೂಪದಿಂದ ಗುರುಗಳಿಗೆ ಪರಮ ಗುರುಗಳಿಗೆ, ಅವರ ಗುರುಗಳಿಗೆ ಹೀಗೆ ಅನುಕ್ರಮವಾಗಿ ವಂದಿಸುವದನ್ನು ನೋಡಿದರೆ ಯಾರಿಗೆ ಸೋಜಿಗವೆನಿಸಲಿಕ್ಕಿಲ್ಲ? ಯಾರಿಗೆ ನಗೆ ಬರಲಿಕ್ಕಿಲ್ಲ? ಭಾರತೀದೇವಿಯುವರಲ್ಲಿ ಕೊಂಚ ಕೋಪವು ತಲೆದೋರಿದ್ದೂ ಇದಕ್ಕಾಗಿಯೇ! ಹೀಗೆ ಶ್ರೀ ಪೂರ್ಣಬೋಧರು ನಿತ್ಯಕರ್ಮಗಳನ್ನು ಗುರುಗಳಿಂದ ಕಲಿತುಕೊಳ್ಳುವ ನೆವದಿಂದ ತಾವು ಮಾಡಿ ಗುರುಗಳಿಗೇ ಹೆಚ್ಚಿನ ನಿಷ್ಠೆಯನ್ನು ಕಲಿಸಿದರು. ಪೂರ್ಣಬೋಧರು ಸದಾ ಪ್ರಸನ್ನನಾದ ಶ್ರೀಹರಿಯನ್ನು ತಮ್ಮ ನಿತ್ಯ ಅನುಷ್ಠಾನದಿಂದ ಹೆಚ್ಚಿಗೆ ಪ್ರಸನ್ನ ಮಾಡಿಕೊಂಡರು.

ಮುಂದೆ ಸ್ವಲ್ಪ ದಿವಸಗಳಲ್ಲಿ ಗುರುಗಳೊಡನೆ ಪೂರ್ಣಬೋಧರು ಉಡುಪಿಗೆ ಬಂದು ಶ್ರೀ ಅನಂತೇಶ್ವರನಿಗೆ ವಂದಿಸಿದ ಕೂಡಲೆ ಗರ್ಭಗುಡಿಯಿಂದ ಧ್ವನಿಯು ಕೇಳಿಸಿತು "ಇಕೋ ಇದೇ ನೀನು ಮಾಡಿದ ತಪಸ್ಸಿನ ಫಲ; ಈ ಶಿಷ್ಯರೂಪವಾಗಿ ಫಲಿಸಿದೆ'' ಎಂದು. ಅಚ್ಯುತಪ್ರೇಕ್ಷರು ಅದನ್ನು ಕೇಳಿ ಸಂತುಷ್ಟರಾದರು. ಕೃತಾರ್ಥರೆಂದು ತಿಳಿದರು ತಾವು ನಿಸ್ಸಂಗರಾದರೂ ಶಿಷ್ಯನಲ್ಲಿ ವಿಶೇಷ ಅನುರಾಗವುಳ್ಳವರಾದರು ವಿರಕ್ತರೂ ಸಜ್ಜನರಲ್ಲಿ ಅನುರಕ್ತರಾಗುವದು ಸ್ವಾಭಾವಿಕವಲ್ಲವೆ?

ಪೂರ್ಣಪ್ರಜ್ಞರು ಸನ್ಯಾಸವನ್ನು ಸ್ವೀಕರಿಸಿದ ಸ್ವಲ್ಪ ದಿವಸಗಳಲ್ಲಿ ಇವರ ಕೀರ್ತಿಯು ಎಲ್ಲ ಕಡೆಗೂ ಹಬ್ಬಿದೆ. ಇದು ಅಸೂಯಾಪರರಿಗೆ ಸಹನವಾಗುವದು ಹೇಗೆ? ವಾದವಿವಾದಕ್ಕೆ ವಾಸುದೇವಶಾಸ್ತ್ರಿಗಳೇ ಮೊದಲಾದ ಪ್ರಚಂಡ ತಾರ್ಕಿಕರು ಬಂದಿರುವರು. ಅಚ್ಯುತಪ್ರೇಕ್ಷರಿಗೆ ಏನಾಗುವದೋ ಎಂದು ಭಯ. ಶಿಷ್ಯನಿಗೆ ಇನ್ನೂ ಸಾಕಷ್ಟು ಅಧ್ಯಯನವಾಗಿಲ್ಲವೆಂಬುದೇ ಮನದ ಚಿಂತೆ. ಅಧ್ಯಯನ ಮಾಡಿಸಲು ಅವಕಾಶವೂ ಇದ್ದಿಲ್ಲ. ಆಶ್ರಮವಾಗಿ ನಾಲ್ವತ್ತೇ ದಿನಗಳು ಮಾತ್ರ ಆಗಿವೆ. ಪ್ರತಿಸ್ಪರ್ಧಿಗಳೊಂದಿಗೆ ಮೂರು ದಿನ ವಾದ ನಡೆಯಿತು. ಹೊಟ್ಟೆಕಿಚ್ಚಿನಿಂದ ಉರಿಯುವ ಈ ತಾರ್ಕಿಕರನ್ನು ಪೂರ್ಣಪ್ರಜ್ಞರು

ನಿರಾಯಾಸವಾಗಿ ಸೋಲಿಸಿ ಅವರಿಂದ ಜಯಪತ್ರಗಳನ್ನು ತಕೊಂಡರು ಶ್ರೀ ಪೂರ್ಣಬೋಧರಿಗೆ ಗಂಗಾಸ್ನಾನ ಮಾಡಬೇಕೆಂದು ಇಚ್ಛೆಯಾಗಿದೆ. ಅದಕ್ಕಾಗಿ ಕಾಶೀಯಾತ್ರೆಗೆ ಹೊರಡುವ ವಿಚಾರವನ್ನು ಗುರುಗಳಿಗೆ ತಿಳಿಸಿದರು. ಗುರುಗಳಿಗೆ ಭಯ, ಶಿಷ್ಯನ ವಿಯೋಗವಾಗುವದೆಂದು ಅದಕ್ಕಾಗಿ ದೇವರನ್ನು ಧ್ಯಾನಿಸಿದರು; ದೇವರೂ ಇವರ ಭಯವನ್ನು ದೂರ ಮಾಡಿದನು. ಇವತ್ತಿನಿಂದ ಮೂರನೇ ದಿನ ಭಾಗೀರಥಿಯು ಇಲ್ಲಿಗೇ ಬರುವಳು; ಕಾಶಿಗೆ ಹೋಗುವ ಆವಶ್ಯಕತೆ ಇಲ್ಲವೆಂದು ದೇವರು ಹೇಳಿದನು ಅದರಿಂದ ಗುರುಗಳಿಗೂ ಸಂತೋಷ ಶಿಷ್ಯರಿಗೂ ಹರ್ಷ. ಭಾಗೀರಥಿಯು ಅಂದಿನಿಂದ ಇಂದಿಗೂ ಉಡುಪಿಯ ಸರೋವರದಲ್ಲಿ ಹನ್ನೆರಡು ವರ್ಷಕ್ಕೊಮ್ಮೆ ಪ್ರತ್ಯಕ್ಷಳಾಗುವಳು.

ಅಚ್ಯುತಪ್ರೇಕ್ಷರು ಮರುದಿನದಿಂದ ಶಿಷ್ಯನಿಗೆ ಅಧ್ಯಯನವನ್ನು ಪ್ರಾರಂಭಿಸಿದರು. ಇಷ್ಟಸಿದ್ಧಿಯೆಂಬ ಗ್ರಂಥದ ಪ್ರವಚನ ನಡೆಯಿತು. ಪೂರ್ಣಬೋಧರು ಕೇಳುತ್ತ ಕುಳಿತರು. ಮೊದಲನೆಯ ಶ್ಲೋಕವು ಪ್ರಾರಂಭವಾದೊಡನೆಯೇ ಆ ಶ್ಲೋಕದಲ್ಲಿಯೇ ಹದಿನಾರು ದೋಷಗಳನ್ನು ಪೂರ್ಣಬೋಧರು ಕಂಡುಹಿಡಿದರು ದೋಷನಿವಾರಣೆ ಮಾಡಲು ಗುರುಗಳು ಅಶಕ್ತರಾದರು ಪೂರ್ಣಪ್ರಜ್ಞರು ಮುಂದೆ ಸಾಗಗೊಡಲಿಲ್ಲ. ಕೂಡಲೆ ಗುರುಗಳು "ಶೇಷಂ ಕೋಪೇನ ಪೂರಯೇತ್" ಎಂಬ ನ್ಯಾಯವನ್ನೇ ಅವಲಂಬಿಸಿದರು. "ಇಲ್ಲಯ್ಯಾ! ನಿನಗೆ ಹೇಳುವ ಸಾಮರ್ಥ್ಯವು ನಮಗೆಲ್ಲಿಯದು?" ಎಂದರು. ಅಲ್ಲಿಗೆ ಅಂದಿನ ಅಧ್ಯಯನವೇ ಮುಗಿಯಿತು. ಆದರೆ ಕೂಡಿದ ಜನರಲ್ಲಿ ಹುಟ್ಟಿದ ಸಂಶಯವು ಹೋಗಲಿಲ್ಲ. ಬೆಳೆಯುತ್ತಲೇ ಹೋಯಿತು. ಮಾಯಾ ಶಾಸ್ತ್ರದ ವಿಷಯಕ್ಕೆ ಅವರಲ್ಲಿ ಅವಿಶ್ವಾಸವೂ ಪೂರ್ಣಬೋಧರ ಪಾಂಡಿತ್ಯದಲ್ಲಿ ವಿಶ್ವಾಸವೂ ಹುಟ್ಟಿದವು.

ಒಂದು ದಿನ ಗುರುಗಳು ಭಾಗವತವನ್ನು ಹೇಳುತ್ತಿದ್ದಾರೆ. ಐದಾರು ಜನರು ಪುಸ್ತಕಗಳನ್ನು ಹಿಡಿದು ಕೇಳುತ್ತಿದ್ದಾರೆ. ಪಾಠಭೇದವು ಬಂದುದರಿಂದ ಯಾವದು ನಿಜವೆಂದು ಎಲ್ಲರಿಗೂ ಗೊಂದಲ.

ಪ್ರತಿ ಪುಸ್ತಕದಲ್ಲಿ ಬೇರೆ ಬೇರೆಯೇ ಬರೆದಿತ್ತು. ಈ ಸಮಯದಲ್ಲಿ ಪೂರ್ಣಪ್ರಜ್ಞರು ಮಾತ್ರ ಇದೇ ರೀತಿಯು ಶ್ರೀ ವೇದವ್ಯಾಸರಿಗೆ ಸಮ್ಮತವು" ಎಂದು ಸಿಧ್ಧಾಂತವಾಗಿ ಹೇಳಿದರು. ಇದೇ ಏಕೆ ನಿಜ? ಬೇರೆ ರೀತಿಗಳೇಕೆ ಅಲ್ಲ?" ಎಂದು ಗುರುಗಳು ಕೇಳದಿರಲಿಲ್ಲ. ಅದಕ್ಕೆ ವ್ಯಾಸರ ಕೃತಿಯು ನನಗೆ ಗೊತ್ತುಂಟೆಂದು ಪೂರ್ಣಪ್ರಜ್ಞರು ಆತ್ಮ ಪ್ರತ್ಯಯ ಪೂರ್ವಕವಾಗಿ ಹೇಳಿಬಿಟ್ಟರು. ಕೂಡಲೆ ಗುರುಗಳು "ಹೀಗಿದ್ದರೆ ಐದನೇ ಸ್ಕಂಧದಲ್ಲಿಯ ಗದ್ಯವನ್ನು ಅನ್ನು ನೋಡೋಣ! ನಿನಗೆ ಬಾದರಾಯಣರ ಕೃತಿಯು ಗೊತ್ತಿದ್ದರೆ ಇದೂ ಗೊತ್ತಿರಬೇಕು" ಎಂದು ವ್ಯಂಗ್ಯವಾಗಿ ಅಂದರು ಶಿಷ್ಯರೂ ಪುಸ್ತಕಗಳನ್ನು ಹಿಡಿದು ಪರೀಕ್ಷಿಸಲು ಉತ್ಸುಕರಾದರು. ಪೂರ್ಣಬೋಧರಿಗೆ ಇದೆಲ್ಲ ಹಾಸ್ಯವೆನಿಸಿತು. ಭಾಗವತ ಪಂಚಮಸ್ಕಂಧವನ್ನೇ ಅಂದು ಮುಗಿಸಿದರು ತಾವು ಮೊದಲು ಹೇಳಿದ ಪಾಠವುಳ್ಳ ಪುಸ್ತಕಕ್ಕೆ ಅನುಸಾರವಾಗಿಯೇ ಇವರು ಅನ್ನುತ್ತಿದ್ದರು. ಮಧ್ಯದಲ್ಲಿ ನಿಲ್ಲಲಿಲ್ಲ. ಆಂ ಊಂ ಅನ್ನಲಿಲ್ಲ. ಗಂಗಾಪ್ರವಾಹದಂತೆ ಗಂಭೀರವಾಗಿ ಪೂರ್ಣವಾಗಿ ವಾಣಿಯು ನಡೆಯಿತು; ಪಂಚಮ ಸ್ಕಂಧವು ಮುಗಿಯಿತು. ಆರನೇದನ್ನು ಪ್ರಾರಂಭಿಸಿದರು. ಅದನ್ನ ನೋಡಿ ಎಲ್ಲರೂ ಆಚ್ಚರಿಗೊಂಡರು. ಗುರುಗಳು ಶಿಷ್ಯನನ್ನು ವಾತ್ಸಲ್ಯದಿಂದ ನೋಡಿ "ಏನಿದು? ಈ ಜನ್ಮದಲ್ಲಿಯೇ ಕೇಳದ ನೋಡದ ಭಾಗವನ್ನು ನೀನು ಹೀಗೆ ಅನ್ನುವಿ?" ಎಂದು ಕೇಳಿದರು "ಈ ಜನ್ಮದಲ್ಲಿಲ್ಲ; ಆದರೆ ಪೂರ್ವ ಜನ್ಮದಲ್ಲಿ ಓದಿರುವೆ" ಎಂದು ಶಿಷ್ಯನ ಉತ್ತರ ಈ ಮೊದಲಾದ ಆನೇಕ ಲೀಲೆಗಳಿಂದ ಪೂರ್ಣಪ್ರಜ್ಞರ ಕೀರ್ತಿಯು ನಾಡಿನಲ್ಲೆಲ್ಲ ಪಸರಿಸತೊಡಗಿತು.

## ವಾದಿಪರಾಜಯ

ಹೀಗೆ ಪೂರ್ಣಬೋಧರ ಕೀರ್ತಿಯು ದೇಶದಲ್ಲೆಲ್ಲ ಹಬ್ಬುವದನ್ನು ಕಂಡು ಯಾರಿಗೆ ಆನಂದವಾಗಲಿಕ್ಕಿಲ್ಲ? ಶ್ರೀ ಅಚ್ಯುತಪ್ರೇಕ್ಷರಂತೂ ತಾವು ಕೃತಾರ್ಥರಾದೆವೆಂದು ತಿಳಿದು ವೇದಾಂತ ವಿದ್ಯೆಯೆಂಬ ತಮ್ಮ ರಾಜ್ಯದ ಪಾಲನ ಮಾಡುವದಕ್ಕೆ ಇವರಿಗೆ ಪಟ್ಟಾಭಿಷೇಕವನ್ನೇ ಮಾಡಿ

ಇವರ ಬುದ್ಧಿ ಜ್ಞಾನ ವೈರಾಗ್ಯಗಳಿಗೆ ಅನ್ವರ್ಥಕವಾಗುವಂತೆ ಆನಂದ ತೀರ್ಥರೆಂಬ ಹೊಸ ಹೆಸರನ್ನೇ ಕೊಟ್ಟರು. ಪೂರ್ಣಬೋಧರು ಮಾಡಿದ ಶಾಸ್ತ್ರಗಳೆಲ್ಲ ಆನಂದಕರವಾದವುಗಳು; ಇವರ ಹೃದಯವು ಆನಂದರೂಪನಾದ ಶ್ರೀಮನ್ನಾರಾಯಣನಿಗೆ ವಾಸಸ್ಥಾನವಾದುದು; ಆದುದರಿಂದ ಇವರಿಗೆ ಆನಂದತೀರ್ಥರೆಂಬ ಹೆಸರು ಅನ್ವರ್ಥವೇ ಆದುದೆಂದು ಬಹು ಜನ ವಿದ್ವಾಂಸರು ಕೊಂಡಾಡಿದರು. ಆನಂದತೀರ್ಥರ ಸಹವಾಸದಲ್ಲಿ ಅಚ್ಯುತಪ್ರೇಕ್ಷರು ಆನಂದದಿಂದ ಕಾಲ ಕಳೆಯುತ್ತಿದ್ದರು. ಯತಿಗಳಾಗಿದ್ದ ಅಚ್ಯುತಪ್ರೇಕ್ಷರ ಗೆಳೆಯರೊಬ್ಬರು ತಮ್ಮ ಮಿತ್ರರನ್ನು ಕಾಣುವದಕ್ಕೆಂದು ಶಿಷ್ಯಪರಿವಾರದೊಂದಿಗೆ ಇದೇ ಸಮಯಕ್ಕೆ ಉಡುಪಿಗೆ ಬಂದರು ಅವರ ಶಿಷ್ಯರೂ ಪಂಡಿತರು, ತಾರ್ಕಿಕರು. ಅವರು ಆನಂದತೀರ್ಥರನ್ನು ಕಂಡು ಇವರನ್ನು ಗೆಲ್ಲಬೇಕೆಂದು ಬಯಸಿದರು ಶಿಷ್ಯ ಶಿಷ್ಯರಲ್ಲಿಯೇ ನಡೆದ ವಾದವಿವಾದವನ್ನು ನೋಡಲು ಇಬ್ಬರೂ ಗುರುಗಳು ಕುಳಿತಿರುವರು ಅನೇಕ ರೀತಿಯ ತರ್ಕಗಳನ್ನು ಶಿಷ್ಯರು ಮಾಡಿದರು. ಆದರೆ ಆನಂದತೀರ್ಥರೊಬ್ಬರೇ ಅವರೆಲ್ಲರ ಅನುಮಾನಗಳನ್ನು ಖಂಡಿಸಿದರು. ಇದನ್ನು ನೋಡುತ್ತ ಕುಳಿತ ಯತಿಗಳಿಗೆ ಭಾರತೀಯ ಯುದ್ಧದಲ್ಲಿ ಅನೇಕರೊಂದಿಗೆ ಒಬ್ಬನೇ ಕಾದಾಡಿದ ಅರ್ಜುನನ ನೆನಪಾಗಿ ಬಹಳ ಸಂತೋಷವಾಯಿತು. ತಮ್ಮ ಶಿಷ್ಯರಲ್ಲಿದ್ದ ಅಹಂಕಾರಕ್ಕೆ ತಕ್ಕ ಪ್ರಾಯಶ್ಚಿತ್ತವೂ ದೊರೆಯಿತೆಂದು ಮನದಲ್ಲಿ ಹರ್ಷಪಟ್ಟರು. ಶ್ರೀಮದಾನಂದತೀರ್ಥರ ಅನುಮಾನ ಪಾಂಡಿತ್ಯವನ್ನು ಕಂಡು ಇವರಿಗೆ ಆನಂದತೀರ್ಥರೆನ್ನುವದಕ್ಕಿಂತ "ಅನುಮಾನ" ತೀರ್ಥರೆನ್ನುವದೇ ಯೋಗ್ಯ" ಎಂದು ಅಂದರು

ಇದೇ ಸಮಯದಲ್ಲಿ ಮಾಯಾವಾದಿಗಳಲ್ಲಿ ಅತ್ಯಂತ ಗಹನ ಪಂಡಿತರೆಂದು ಹೆಸರು ಪಡೆದ ವಾದಿಸಿಂಹ ಹಾಗು ಬುದ್ಧಿಸಾಗರ ಎಂಬವರಿಬ್ಬರು ದಿಗ್ವಿಜಯಕ್ಕಾಗಿ ಹೊರಟಿದ್ದರು. ಅವರಿಗೆ ಶ್ರೀಮದಾನಂದತೀರ್ಥರ ಕೀರ್ತಿಯು ಹೇಗೆ ಸಹನವಾದೀತು? ಆನಂದತೀರ್ಥರು ಮಾಯಾವಾದ ಶಾಸ್ತ್ರವನ್ನು ಖಂಡಿಸುವರೆಂದು ಕೇಳಿ ಅವರನ್ನು

ಜಯಿಸುವ ಅಭಿಲಾಷೆಯಿಂದ ಇಬ್ಬರೂ ಉಡುಪಿಗೆ ಬಂದರು. ಆದರೆ ಮಾರ್ಗದಲ್ಲಿ ಅಚ್ಯುತಪ್ರೇಕ್ಷರೊಬ್ಬರೇ ಇದ್ದರು. ಆದರೂ ಇವರು ವಾದಾರ್ಥವಾಗಿ ಬಂದುದನ್ನು ತಿಳಿದು ಶ್ರೀ ಅಚ್ಯುತಪ್ರೇಕ್ಷರು ಆನಂದ ತೀರ್ಥರನ್ನು ಕರೆಯಿಸಿಕೊಂಡರು. ಕೂಡಲೆ ಶ್ರೀಮದಾನಂದತೀರ್ಥ ರಿಗೂ ವಾದಿಸಿಂಹ ಬುದ್ಧಿಸಾಗರರಿಗೂ ವಾದವು ನಡೆಯಿತು ಇದನ್ನು ನೋಡಲು ಆ ಸೀಮೆಯ ಜನರೆಲ್ಲ ಕಲೆತಿದ್ದರು. ಇಷ್ಟರಲ್ಲಿ ವಾದಿಸಿಂ ಹನ ವಾಕ್ಯವೊಂದನ್ನು ಪೂರ್ಣಬೋಧರು ಖಂಡಿಸಿದರು. ಆದರೆ ವಾದಿಸಿಂಹನು ಅವರು ಹೇಳಿದ ವಾಕ್ಯಕ್ಕೆ ಹದಿನೆಂಟು ಪ್ರಕಾರದ ಅರ್ಥವನ್ನು ಹೇಳಿ ಅಟ್ಟಹಾಸದಿಂದ ನಕ್ಕು ಅರ್ಭಟಿಸಲು ಜನರಲ್ಲಿ ಆನಂ ದತೀರ್ಥರ ವಿಜಯದ ವಿಷಯವಾಗಿ ಸಂಶಯ ಹುಟ್ಟಿತು ಆದರೆ ಸೂರ್ಯನು ಒಮ್ಮೆಲೆ ಕತ್ತಲೆಯನ್ನು ಖಂಡಿಸುವಂತೆ ಶ್ರೀಮದಾನಂದ ತೀರ್ಥರು ವಾದಿಸಿಂಹನ ಹದಿನೆಂಟೂ ಅರ್ಥಗಳನ್ನೆಲ್ಲ ಒಂದೇ ವಾಕ್ಯ ದಿಂದ ಖಂಡಿಸಿದರು. ಇಷ್ಟರಲ್ಲಿ ಬುದ್ಧಿಸಾಗರನು ಮುಂದಾದನು. ಆದರೆ ಅವನ ಗತಿಯೂ ವಾದಿಸಿಂಹನಂತೆಯೇ ಆಯಿತು ಶ್ರೀಮದಾ ನಂದತೀರ್ಥರ ಬುದ್ಧಿ ವೈಭವವನ್ನೂ ಕುತರ್ಕಖಂಡನವನ್ನೂ ನೋಡಿ ಅವರು ತಮಗೆ ಸೋಲು ತಪ್ಪಿದ್ದಲ್ಲವೆಂದು ಭಯದಿಂದ "ನಾಳೆ ಮತ್ತೆ ವಾದ ನಡೆಯಲಿ. ಇಂದಿಗೆ ಸಾಕು'' ಎಂದು ಹೇಳಿದರು ಆದರೆ ಶ್ರೀಮದಾನಂದತೀರ್ಥರು "ನಾಳೇಕೆ? ಈಗಳೇ ನಡೆಯಲಿ'' ಎಂದರು. ಆದರೂ ವಾದಿಗಳು ಅಲ್ಲಿ ಕೂಡಲಿಲ್ಲ. ರಾತ್ರಿಯ ಸಮಯದಲ್ಲ ಅವರು ಅಲ್ಲ ನಿಲ್ಲಲೇ ಇಲ್ಲ. ಆದರೆ ಅವರು ಸಂಪಾದಿಸಿದ ಜಯಪತ್ರಗಳು ಮಾತ್ರ ಅವರು ಇಳಿದಲ್ಲಿಯೇ ಇದ್ದವು!

ಒಂದು ದಿನ ಶ್ರೀಮದಾನಂದತೀರ್ಥರು ಶಾಂಕರಭಾಷ್ಯವನ್ನು ಹೇಳುತ್ತಿರುವರು. ಅವರ ಸುತ್ತಲೂ ತರ್ಕಶಾಸ್ತ್ರ ಪಾರಂಗತರೂ ವೇದಾಂತಕೇಸರಿಗಳೂ ಕುಳಿತು ಪ್ರವಚನವನ್ನು ಕೇಳುತ್ತಿರುವರು. ಇವರ ವ್ಯಾಖ್ಯಾನದಲ್ಲಿಯೇ ಅವರೆಲ್ಲರ ಮನಸ್ಸು ತಲ್ಲೀನವಾಗಿದೆ, ಆದರೆ ಆಚಾರ್ಯರಿಗೆ ಮಾತ್ರ ಸೂತ್ರಗಳಿಗೂ ಭಾಷ್ಯಕ್ಕೂ ಸಂಬಂ

ಧವೇ ಇಲ್ಲದಂತೆನಿಸಿದೆ. ಆದನ್ನೇ ಆವರು ಕೂಡಿದ ಪಂಡಿತರೆದುರಿಗೆ ಹೇಳಿದರು. ಶ್ರೀಬಾದರಾಯಣರು ಹೇಳಿದ ಸೂತ್ರಕ್ಕೂ ಹಾಗು ಆದರ ಈ ಭಾಷ್ಯಕ್ಕೂ ಏನೂ ಸಂಬಂಧವೇ ಇಲ್ಲವಲ್ಲ! ಇದರಲ್ಲಿಯ ಅರ್ಥವೆಲ್ಲ ಯಾವದೋ ಒಂದು ಗೂಢವಾದ ಆಗ್ರಹವನ್ನೇ ಅನುಸರಿಸುತ್ತದಲ್ಲದೆ ನಿಜಾರ್ಥವಾಗಲಾರದೆಂದು ಹೇಳಿದರು. ಇದನ್ನು ಕೇಳಿ ಕೂಡಿದ ಜನರೆಲ್ಲ ಸೋಜಿಗಗೊಂಡರು. ಹಲವರು ಸಿಟ್ಟಿಗೆದ್ದರು. "ಅದು ಹೇಗೆ?" ಎಂದೂ ಕೆಲವರು ಕೇಳಿಬಿಟ್ಟರು ಕೂಡಲೆ ಆಚಾರ್ಯರು ಆ ಭಾಷ್ಯದಲ್ಲಿಯ ಅನೇಕ ಪ್ರಬಲ ದೋಷಗಳನ್ನು ಮುಂದಿಟ್ಟರು ಅವುಗಳನ್ನು ಖಂಡಿಸಲು ಯಾರಿಗೂ ಶಕ್ಯವಾಗಲಿಲ್ಲ. ಪಂಡಿತರೂ ತಾರ್ಕಿಕರೂ ಸುಮ್ಮನಾದರು. ನೀವು ಆದರ ಖಂಡನವನ್ನು ಮಾತ್ರ ಮಾಡುವಿರಿ; ಅಷ್ಟೇ ಏಕೆ? ಯೋಗ್ಯಾರ್ಥವನ್ನೂ ಹೇಳಿರಿ ಎಂದೂ ಕೆಲವರಂದರು. ಹೀಗೆಂದೊಡನೆಯೇ ಪೂರ್ಣಪ್ರಜ್ಞರು ಸೂತ್ರಗಳ ನಿಜಾರ್ಥವನ್ನು ಹೇಳಲು ಉಪಕ್ರಮಿಸಿದರು. ಅವರ ಆ ನಿರ್ದೋಷವಾದ ಗಂಭೀರವಾಣಿಯಿಂದ ಎಲ್ಲರೂ ಸಂತೋಷಭರಿತರಾದರು. ಶ್ರುತಿಸ್ಮೃತಿಗಳಿಂದ ಮಾನ್ಯವಾದ ಇವರ ಅರ್ಥವನ್ನು ಕೇಳಿ ಪಂಡಿತರೆಲ್ಲರೂ ತಲೆದೂಗಿದರು. ಹೀಗೆ ಪ್ರವಚನ ನಡೆದ ಕಾಲಕ್ಕೆ ಕೆಲವರು ತಿಳಕೊಳ್ಳಲು ಪ್ರಶ್ನೆ ಮಾಡುತ್ತಿದ್ದರೆ ಹಲವರು ಇವರನ್ನು ಗೆಲ್ಲಬೇಕೆಂದು ಕೇಳುತ್ತಿದ್ದರು. ಇನ್ನು ಹಲವರು ಮತ್ಸರದಿಂದ ವಿಚಾರಿಸಿದರೆ ಮತ್ತೆ ಕೆಲವರು ಆನಂದದಿಂದ ಕೇಳುತ್ತಿದ್ದರು ಹೀಗೆ ಶ್ರುತಿಸ್ಮೃತಿತರ್ಕತಂತ್ರಕುಶಲರನ್ನೆಲ್ಲರನ್ನು ಆನಂದತೀರ್ಥರು ಬೆರಗುಗೊಳಿಸಿದರು.

ಪೂರ್ಣಬೋಧರ ಕೀರ್ತಿವೈಭವವನ್ನು ಕೇಳಿ ಮಧ್ಯಗೇಹಭಟ್ಟರು ಅಲ್ಲಿಗೆ ಬಂದು ತಮ್ಮ ಮಗನನ್ನು ಕಂಡು ಸಂತುಷ್ಟರಾದರು. ಸಜ್ಜನರು ಗುಣಲುಬ್ಧರಲ್ಲವೇ? ಅಚ್ಯುತಪ್ರೇಕ್ಷರಿಗೂ ಅವರ ಶಿಷ್ಯರಿಗೂ ಒಂದು ದಿನ ವಾದ ನಡೆದಿದೆ. ವಾದವಿಷಯವು ಶಾಂಕರಭಾಷ್ಯವೆ. ಆ ಭಾಷ್ಯದಲ್ಲಿದ್ದ ದೋಷಗಳನ್ನು ನಿವಾರಣೆ ಮಾಡಲು ಗುರುಗಳು ಅಸಮರ್ಥರಾದರು. ಕೂಡಲೆ "ನೀನಿಷ್ಟು ಜಾಣನಿದ್ದರೆ

ಸೂತ್ರಕ್ಕೆ ಬೇರೆ ಭಾಷ್ಯವನ್ನು ಬರೆ" ಎಂದು ಗುರುಗಳು ಕೊಂಚ ರೋಷದಿಂದ ಉಸುರಿದರು. ಹಂಸವು ಹಾಲಿನಲ್ಲಿದ್ದ ನೀರನ್ನು ಬಿಡುವದು ಸಹಜವಲ್ಲವೇ? ಈ ಹಂಸರಾಜನು ಬರೆ' ಎಂಬ ಗುರ್ವಾಜ್ಞೆಯಲ್ಲಿದ್ದ ಇಷ್ಟವನ್ನು ಬಿಟ್ಟುಕೊಟ್ಟು ಮುಕ್ಕದ್ದನ್ನೇ ಮನ್ನಿಸಿದನು. ಇದೇ ಸಮಯದಲ್ಲಿ ಶ್ರೇಷ್ಠಯತಿಗಳೋರ್ವರು ಅಲ್ಲಿಗೆ ಬಂದರು. ಇವರು ನಿಂಬೆಯಾನರ ವಂಶದವರು. ವೈರಾಗ್ಯ, ನಯ, ನೀತಿ ಸಮನ್ವಿತರು; ಜ್ಞಾನಿಗಳು. ಇವರು "ವೇದಾಂತ ಸೂತ್ರಕ್ಕೂ ಭಾಷ್ಯಕ್ಕೂ ವಿರೋಧವಿದ್ದರೆ ಇರಲಿ. ಅದರಿಂದ ನಮಗೇನು ಹಾನಿ? ಆದರೆ ವೇದೋಪನಿಷತ್ತುಗಳಲ್ಲಿ ಉಕ್ತವಾದ ಸೂತ್ರಾರ್ಥವನ್ನು ನಮಗೆ ನೀನು ಹೇಳು" ಎಂದು ಆನಂದತೀರ್ಥರಿಗೆ ಹೇಳಿದರು. ಇವರು ಉಪನಿಷದರ್ಥವನ್ನು ಸಮಂಜಸವಾಗಿ ಹೇಳಿದ್ದನ್ನು ಕೇಳಿ ಎಲ್ಲರೂ ಆನಂದಭರಿತರಾದರು.

## ದಿಗ್ವಿಜಯ

ಹೀಗೆ ಆನಂದತೀರ್ಥರು ಪ್ರವಚನ [illegible] ಯಿಸುತ್ತ ತಮ್ಮ ಸೇನೆಯಲ್ಲಿಯ ಪಂಡಿತರನ್ನು [illegible] ದಿಗ್ವಿಜಯಕ್ಕೆಂದು ದಕ್ಷಿಣ ದಿಕ್ಕಿಗೆ ಹೊರಟರು. ಪಟ್ಟಾಭಿಷೇಕವಾದೊಡನೆಯೇ ದಿಗ್ವಿಜಯ ಮಾಡುವದು ಕ್ರಮಪ್ರಾಪ್ತವಲ್ಲವೆ? ಶ್ರೀಅಚ್ಯುತಪ್ರೇಕ್ಷರೂ ಶಿಷ್ಯರೊಂದಿಗೆ ಹೊರಟರು. ಶಿಷ್ಯನನ್ನು ಅಗಲುವದು ಅವರಿಗೆ ಹೇಗೆ ಸಹನವಾಗಬೇಕು? ಇವರು ಮೊದಲು ವಿಷ್ಣುಮಂಗಲ ದೇಶಕ್ಕೆ ಬಂದರು. ಈಗ ಈ ದೇಶವು ಮಂಗಳೂರು ಜಿಲ್ಲೆಯ ಕಾಸರಗೋಡು ತಾಲೂಕಿನ ಕೆಲವು ಭಾಗವು. ಇಲ್ಲಿ ಈಗಲೂ ವಿಷ್ಣುಮಂಗಲ, ಕುಮಾರ ಮಂಗಲವೆಂಬ ಹೆಸರಿನ ಊರುಗಳು ಇವೆ. ಇವು ಕಾಸರಗೋಡಿನಿಂದ ಮೂರು ಮೈಲು ಅಂತರದಲ್ಲಿವೆ. ಮಧ್ಯದಲ್ಲಿ ಪಯಸ್ವಿನೀನದಿಯೂ ಉಂಟು. ಈ ನದಿಗೆ ಚಂದ್ರಗಿರಿಯೆನ್ನುವರು. ಅಲ್ಲಿ ಜಗನ್ಮಂಗಲಕರನಾದ ಶ್ರೀಮನ್ನಾರಾಯಣನಿಗೆ ವಂದಿಸಿದರು. ಯತಿಗಳನ್ನು ಒಬ್ಬನು ಭಿಕ್ಷೆಗೆ ಕರೆದನು. ಭೋಜನವಾಗಿ ಮಾತಾಡುತ್ತ ಕುಳಿತ ಕಾಲಕ್ಕೆ

ಮನೆಯ ಯಜಮಾನನ ಮನದಲ್ಲಿ ಇವರನ್ನು ಪರೀಕ್ಷಿಸಬೇಕೆಂದು ಬಂದಿದೆ. ಕೂಡಲೆ ಬಾಳೆಯ ಹಣ್ಣಿನ ಗೊನೆಯೊಂದನ್ನು ತಂದು ಮುಂದಿಟ್ಟು "ಸ್ವಾಮೀ ಇವುಗಳನ್ನು ಸ್ವೀಕರಿಸಬೇಕು." ಎಂದು ಬಿನ್ನವಿಸಿದನು. ಜೀವೋತ್ತಮರಾದ ಆನಂದತೀರ್ಥರಿಗೆ ಯಜಮಾನನ ಮನೋಗತವು ತಿಳಿಯದಿರಲಿಲ್ಲ. ಕೂಡಲೆ "ಯಾಕಾಗಲೊಲ್ಲದು" ಎಂದು ಹೇಳಿ ಆ ಹಣ್ಣುಗಳನ್ನೆಲ್ಲ ತಿಂದು ತೇಗಿದರು. ಯಜಮಾನನಿಗೆ ಆಶ್ಚರ್ಯವಾಗಿದೆ. ತಾನು ಮನದಲ್ಲಿ ಮಾಡಿದ ಮಾತಿಗೆ ಮರುಗಿದನು. ಗುರುಗಳು ಶಿಷ್ಯರನ್ನು ಕೇಳಿದರು. ಹೊಟ್ಟೆತುಂಬ ಊಟವಾದ ನಂತರ ಎರಡುನೂರಕ್ಕೆ ಮಿಕ್ಕಿದ ಈ ದೊಡ್ಡ ಬಾಳೇಹಣ್ಣುಗಳನ್ನು ತಿಂದರೂ ಹೊಟ್ಟೆಯು ಮೊದಲಿದ್ದಂತೆಯೇ ಇದೆಯಲ್ಲ! ಇದು ಹೇಗೆ ? ಎಂದು. ಆನಂದತೀರ್ಥರು "ನನ್ನ ಹೊಟ್ಟೆಯಲ್ಲಿ ಅಂಗುಷ್ಠಾಕಾರನಾದ ಅಗ್ನಿಯು ಇರುವನು. ಅವನು ಯಾವಾಗಲೂ ಜಾಜ್ವಲ್ಯಮಾನನಾಗಿದ್ದು ಈ ಜಗತ್ತನ್ನೇ ಜೀರ್ಣ ಮಾಡುವಂತಹನಿರುವನು." ಎಂದು ನಗುತ್ತ ಉತ್ತರ ಕೊಟ್ಟರು.

ಮುಂದೆ ಹಾಗೆಯೇ ದಾರಿಯಲ್ಲಿ ಹತ್ತಿದ ನದಿಗಳಲ್ಲಿ ಸ್ನಾನ ಮಾಡಿ ಗುಡಿಗಳಲ್ಲಿದ್ದ ದೇವೋತ್ತಮನಿಗೆ ವಂದಿಸುತ್ತ ಬೆಟ್ಟಿಯಾದ ಪ್ರತಿಸ್ಪರ್ಧಿಗಳನ್ನು ಸೋಲಿಸುತ್ತ ದಕ್ಷಿಣ ದಿಕ್ಕಿಗೆ ಸಾಗಿ ಅನಮಲಾಯಿ ಬೆಟ್ಟಕ್ಕೆ ಬಂದರು. ಅಲ್ಲಿಯ ನಿಸರ್ಗ ರಮಣೀಯತೆಯನ್ನು ನೋಡಿ ಶ್ರೀಮದಾನಂದತೀರ್ಥರು ಅಲ್ಲಿಯೇ ಕೆಲ ದಿನ ಇರುವದನ್ನು ನಿಶ್ಚಯಿಸಿದರು. ಅಲ್ಲಿಯೇ ಸಮೀಪದಲ್ಲಿದ್ದ ೪೦೦೦ ಜನರು ವಿರಾಮವಾಗಿ ಕುಳ್ಳಿರಲು ಅನುವಾದ ಕಲ್ಲು ಬಂಡೆಯೊಂದನ್ನು ಎತ್ತಿ ತಂದು ನೀರಿನ ಝರಿಯ ಹತ್ತರ ಇಟ್ಟರು. ಆ ಕಲ್ಲ ಮೇಲೆಯೇ ಕುಳಿತು ಹಲವು ದಿನ ಗ್ರಂಥಗಳನ್ನು ಬರೆದರು. ಇಂದಿಗೂ ಆ ಕಲ್ಲಿಗೆ "ಮಧ್ವರಾಯರ ಬಂಡೆ" ಎಂದೆನ್ನುವರು. ಅಲ್ಲಿಯೇ ಶ್ರೀ.. ಹನುಮ ಭೀಮ ಮಧ್ವರ ಪ್ರತಿಮೆಗಳನ್ನು ಅವರ ಶಿಷ್ಯರು ಸ್ಥಾಪಿಸಿರುವರು. ಅಲ್ಲಿಯ ರಮಣೀಯ ವನಶ್ರೀಯು, ಜುಳುಜುಳು ಹರಿಯುವ ನೀರಿನ ಝರಿಯು,

ವಿಶಾಲ ಸ್ಥಳವು, ಇವೆಲ್ಲವನ್ನು ಈಗಲೂ ಕಾಣಬಹುದು. ಈ ಸ್ಥಾನವು ಕೊಯಿಮುತ್ತೂರ ಜಿಲ್ಹೆಯ ಉರವಲಪೇಟೆಯ ಸ್ಟೇಶನದ ಹತ್ತಿರ ಉಂಟು. ಅಲ್ಲಿಂದ ಶ್ರೀಮದಾನಂದತೀರ್ಥರು ಕೇರಳ ದೇಶಕ್ಕೇ ಭೂಷಣಪ್ರಾಯವಾದ ಪಯಸ್ವಿನೀ ನದಿಯಲ್ಲಿ ಸ್ನಾನ ಮಾಡಿದರು. ಅಲ್ಲಿಯೇ ದುರ್ಗಾದೇವತೆಯು ಅವತಾರವಾಗುವದೆಂಬದನ್ನು ಅವರ ನೆನಿಸದಿರಲಿಲ್ಲ. ಅಲ್ಲಿಯ ಜನತೆಯಲ್ಲಿ ತಮ್ಮ ಸಿದ್ಧಾಂತಗಳನ್ನು ಹೇಳುತ್ತ ಅನಂತಶಯನಕ್ಕೆ ಬಂದು ಶೇಷಶಾಯಿಯಾದ ಶ್ರೀ ಪದ್ಮನಾಭನಿಗೆ ನಮಸ್ಕರಿಸಿದರು. ಅಲ್ಲಿಯೂ ಸ್ವಲ್ಪ ದಿನ ಇರುವದನ್ನು ಗೊತ್ತು ಪಡಿಸಿದರು. ದಿನಾಲು ಸಭೆ ಕೂಡುತ್ತಿತ್ತು; ಪ್ರವಚನ ನಡೆಯುತ್ತಿತ್ತು. ಪೂರ್ಣಪ್ರಜ್ಞರು ವೇದಾಂತಸೂತ್ರಗಳ ಅರ್ಥ ವನ್ನು ಹೇಳಿ, ಜೀವಜೀವರಲ್ಲಿ ಭೇದವನ್ನೂ ಜೀವಬ್ರಹ್ಮರಲ್ಲಿಯ ಭೇದವನ್ನೂ ಸಮಂಜಸವಾಗಿ ಪ್ರತಿಪಾದಿಸುತ್ತಿದ್ದರು. ಇದು ಅಲ್ಲಿಯ ಹಲವರಿಗೆ ಸಹನವಾಗಲಿಲ್ಲ. ಖಂಡನ ಮಾಡಲು ಸಾಮರ್ಥ್ಯವಿಲ್ಲ. ಹೀಗಾಗಿ ಅವರು ಪೇಚಾಡುತ್ತಿದ್ದರು. ಆದರೂ ಏನಾದರೊಂದು ದೋಷ ಹೇಳಬೇಕೆಂಬ ಅಭಿಲಾಷೆಯು (ಕುಟು ಪುಸ್ತೂರು) "ಸಣ್ಣ ಹೊಸೂರು" ಎನ್ನುವ ಮನೆತನದವನೊಬ್ಬನ ಮನದಲ್ಲಿ ಹುಟ್ಟಿತು. ಆತನು ಸಭೆಯಲ್ಲಿ ಎದ್ದು ನಿಂತು ಆನಂದತೀರ್ಥರನ್ನುದ್ದೇಶಿಸಿ "ಭಾಷ್ಯವನ್ನು ಮಾಡದಲೆ ಹೀಗೆ ಅನ್ಯಾರ್ಥವನ್ನು ಹೇಳುವದು ಅಯೋಗ್ಯ" ಎಂದು ನುಡಿದನು. ಪೂರ್ಣಪ್ರಜ್ಞರು ನಕ್ಕರು. "ಆಗಲಯ್ಯಾ ಭಾಷ್ಯವನ್ನೂ ಮಾಡುತ್ತೇವೆ. ಈಗ ನಾವು ಹೇಳು ವದರಲ್ಲಿ ತಪ್ಪು ಕಂಡರೆ ನೀನು ಹೇಳು" ಎಂದರು. ಎಲ್ಲರೂ ಗಹ ಗಹಿಸಿ ನಕ್ಕರು. "ಆಚಾರ್ಯರ ಮಾತು ಸರಿಯಾದುದು" ಎಂದಂ ದರು. ಇಷ್ಟರಲ್ಲಿ ಹೊಟ್ಟೆಕಿಚ್ಚಿನಿಂದ ಉರಿಯುತ್ತಿದ್ದ ವಿದ್ಯಾಶಂಕರನೆಂಬ ಮತ್ತೊಬ್ಬ ಯತಿಯು ಮುಂದಾಗಿ, ಸುಂದರ ಲಕ್ಷಣ ಸಂಪನ್ನವಾದ "ಇವರ ದೇಹವು ಹಾಗಿದೆ, ಹೀಗಿದೆ" ಎಂದು ಏನೇನೋ ಬಡಬಡಿಸಿ, ಕೊನೆಗೆ ಇವರ ದಂಡಕಾಷ್ಟವನ್ನೇ ಮುರಿಯುತ್ತೇನೆಂದು ಪ್ರತಿಜ್ಞೆಯ

ಮಾಡಿದನು. ಇದನ್ನು ಕೇಳಿದ ಜನರು ಅವನನ್ನೇ ಒಳಿತಾಗಿ ನಿಂದಿಸಿದರು. ಪೂರ್ಣಬೋಧರು ಮಾತ್ರ ನಗುತ್ತಲಿದ್ದರು.

ಶ್ರೀಮದಾನಂದತೀರ್ಥರ ಅಸಾಧಾರಣ ಜ್ಞಾನವನ್ನೂ ಅಗಾಧ ವೈದುಷ್ಯವನ್ನೂ ಅಪ್ರತಿಮವಾದ ಕೌಶಲ್ಯವನ್ನೂ ಅಖಂಡ ವೈರಾಗ್ಯವನ್ನೂ ಕಣ್ಣಾರೆಕಂಡ ಜನಸಮೂಹವಲ್ಲಿ ಅವರ ವಿಷಯವಾಗಿ ಅತ್ಯಂತ ಭಕ್ತಿವಿಶ್ವಾಸಗಳು ನೆಲೆಗೊಳ್ಳುತ್ತಿದ್ದ ಮೂಲಕ "ಶ್ರೀಮದಾಚಾರ್ಯರು' ಎಂಬ ಬಹುಮಾನಸೂಚಕ ಹೆಸರಿನಿಂದ ಜನರೆಲ್ಲ ಅವರನ್ನು ಆದರಿಸಹತ್ತಿದರು. ಹೀಗೆ ಪಂಡಿತ ಪಾಮರರಿಗೆಲ್ಲ ವಂದ್ಯರಾಗುತ್ತ ನಡೆದ ಶ್ರೀಮದಾಚಾರ್ಯರು ಅನಂತರ ಸ್ಥಾನದಿಂದ ಹೊರಟು ಕನ್ಯಾಕುಮಾರಿಗೆ ಹೋಗಿ ಅಲ್ಲಿ ಕನ್ಯಾತೀರ್ಥದಲ್ಲಿ ಸ್ನಾನ ಮಾಡಿ ಅಲ್ಲಿಂದ ಶ್ರೀರಾಮಸೇತುವಿಗೆ ಬಂದು ಸಮುದ್ರಸ್ನಾನ ಮಾಡಿಕೊಂಡು ಶ್ರೀರಾಮೇಶ್ವರನಿಗೆ ವಂದಿಸಿದರು. ಇದೇ ಸಮಯದಲ್ಲಿ ಹಿಂದಕ್ಕೆ ಇವರ ದಂಡವನ್ನು ಮುರಿಯುವೆನೆಂದು ಪ್ರತಿಜ್ಞೆ ಮಾಡಿ ಜನರಿಂದ ಗರ್ಹಿತನಾದ ವಿದ್ಯಾಶಂಕರ ಯತಿಯು ಮತ್ತೆ ಇವರ ಕಣ್ಣಿಗೆ ಬಿದ್ದನು. ಶ್ರೀಮದಾಚಾರ್ಯರು ಅವನನ್ನು ನೋಡಿ ನಗುತ್ತ ದಂಡವನ್ನು ಮುಂದೆ ಚಾಚಿ "ಇಕೋ, ಇದೇ ನನ್ನ ದಂಡಕಾಷ್ಠವು; ತೆಗೆದುಕೊ; ಮುರಿ" ಎಂದು ಹೇಳಿ ತಮ್ಮ ದಂಡವನ್ನು ಮುಂದೆ ಮಾಡಿದರು. ಆದರೆ ಆ ಯತಿಯು ಇವರ ತೇಜಸ್ಸಿನಿಂದ ಕಂಪಿತನಾಗಿ ಮುಂದೆ ಬರಲಾರದೆ ತಲೆತಗ್ಗಿಸಿಕೊಂಡು ಹೊರಟೇ ಹೋದನು. ಶ್ರೀಮದಾಚಾರ್ಯರು ಶ್ರೀ ರಾಮೇಶ್ವರ ಕ್ಷೇತ್ರದಲ್ಲಿಯೇ ಚಾತುರ್ಮಾಸ್ಯಕ್ಕೆ ಕೂತಿರುವರು. ದಿನಾಲೂ ವಿದ್ವತ್ಪರಿಷತ್ತು ಕೂಡುತ್ತದೆ. ವಿದ್ವನ್ಮಂಡಳಿಯು ನೆರೆಯುತ್ತದೆ. ಬೇರೆ ಬೇರೆ ವಿಷಯಗಳ ಚರ್ಚೆ ನಡೆಯುತ್ತಿದೆ. ಯಾವದೇ ವಿಷಯ ಹೊರಟರೂ ಅದರಲ್ಲಿ ಶ್ರೀಮದಾಚಾರ್ಯರು ಯಾರಿಗೂ ತಿಳಿಯದ ತತ್ವರಹಸ್ಯಗಳನ್ನು ತಿಳಿಸುತ್ತಿದ್ದರು ಇದರಿಂದ ಆಚಾರ್ಯರಿಗೆ "ವಿದ್ಯಾಧಿಪತಿ" ಎಂದೂ ವಿದ್ವಾಂಸರು ಅಭಿಮಾನದಿಂದ ಕರೆಯತೊಡಗಿದರು. ಚಾತುರ್ಮಾಸ್ಯವು ಮುಗಿ

ಯಿತು. ರಾಮೇಶ್ವರದಿಂದ ಹೊರಟು ಕಾವೇರೀ ರಂಗನಾಥನನ್ನು ವಂದಿಸಿ ಅಲ್ಲಿಂದ ಶ್ರೀಮುಷ್ಣ ಕ್ಷೇತ್ರಕ್ಕೆ ಬಂದರು. ಹಾಗೆಯೇ ಭೂವರಾಹ ಸನ್ನಿಧಾನ ಪ್ರದೇಶದಲ್ಲಿ ಪ್ರವಾಸ ಮಾಡಿ ಯಾವರ, ತಂಜಾವರಗಳ ಮೇಲಿಂದ ಉತ್ತರಕ್ಕೆ ಬರುವ ಕಾಲಕ್ಕೆ ಚಿದಂಬರ ಕ್ಷೇತ್ರದಲ್ಲಿ ಭಕ್ತನೊಬ್ಬನು ಆತಿಥ್ಯಕ್ಕೆಂದು ಇವರನ್ನು ಕರೆದನು. ಮನೆಯಲ್ಲಿ ಅವನ ಹೆಂಡತಿಯು ಹೊರತು ಬೇರೆ ಒಬ್ಬರಾರೂ ಇರಲಿಲ್ಲ. ನೀರು ಬಹುದೂರದಿಂದ ತರಬೇಕಾಗುತ್ತಿತ್ತು. ಇದನ್ನೆಲ್ಲ ಶ್ರೀಮದಾಚಾರ್ಯರು ನೋಡಿ ದಯಾಪರರಾಗಿ ತಮ್ಮ ದಂಡವನ್ನು ನೆಲಕ್ಕೆ ಹೊಡೆದು ಅಲ್ಲಿಯೇ ನೀರು ಬರಿಸಿದರು. ಆ ದಂಡತೀರ್ಥವು ಇಂದಿಗೂ ಅಲ್ಲಿದೆ. ಹೀಗೆ ಅನೇಕ ಮಹಿಮೆ ತೋರಿಸುತ್ತ ಭಕ್ತರನ್ನು ಉದ್ಧರಿಸುತ್ತ ಉತ್ತರದ ತೀರ್ಥಕ್ಷೇತ್ರಗಳಲ್ಲಿ ಕೆಲಕಾಲ ಸಂಚಾರ ಮಾಡಿದರು.

ಹೀಗೆ ಕೆಲವು ದಿನಗಳನ್ನು ತೀರ್ಥಯಾತ್ರೆಯಲ್ಲಿ ಕಳೆದು ದಿಗ್ವಿಜಯ ಮಾಡಿಕೊಂಡು ಶ್ರೀಮದಾಚಾರ್ಯರು ಮರಳಿ ಕೇರಳ ಪ್ರಾಂತಕ್ಕೆ ಬಂದಿರುವರು. ಪಯಸ್ವಿನೀ (ಚಂದ್ರಗಿರಿ) ನದಿಯ ದಂಡೆಯ ಮೇಲೆ ಒಂದು ದೇವಾಲಯದಲ್ಲಿ ಹೋಗಿ ದೇವೋತ್ತಮನಿಗೆ ವಂದಿಸಿ ಕುಳಿತರು. ಇವರು ಅಲ್ಲಿರುವ ಸುದ್ದಿಯು ಕ್ಷಣಮಾತ್ರದಲ್ಲಿ ಎಲ್ಲೆಡೆಗೂ ಹಬ್ಬಿದೆ. ಇವರನ್ನು ನೋಡುವ ಇಚ್ಛೆಯಿಂದ, ಇವರಿಂದ ಅನುಗ್ರಹ ಸಂಪಾದಿಸುವ ಅಭಿಲಾಷೆಯಿಂದ ಇವರ ಪಾಂಡಿತ್ಯವನ್ನು ನೋಡುವ ಆತುರತೆಯಿಂದ ಇವರನ್ನು ಸೋಲಿಸುವ ಬುದ್ಧಿಯಿಂದ ಜನ ಸಮೂಹವು ತಂಡೋಪತಂಡವಾಗಿ ಬಂದು ಗುಡಿಯನ್ನು ತುಂಬಿತು. ಎಲ್ಲರೂ ಶ್ರೀಮದಾಚಾರ್ಯರ ಎದುರಿನಲ್ಲಿ ಕಾಣಿಕೆಗಳನ್ನಿಟ್ಟು ವಿನಯದಿಂದ ವಂದಿಸಿ ಕುಳಿತಿರುವರು. ಎಲ್ಲರೂ ಆಚಾರ್ಯರ ದರ್ಶನದಿಂದ ಪುನೀತರಾದೆವೆಂದು ಧನ್ಯತೆಯಿಂದ ಅವರ ಮೊಗವನ್ನೇ ನೋಡುತ್ತಿರುವರು. ಪ್ರತಿಕ್ಷಣಕ್ಕೆ ಹೊಸ ಹೊಸದಾಗಿಯೇ ಆಚಾರ್ಯರ ಮೊಗವು ಕಾಣುತ್ತಿತ್ತು. ಎಷ್ಟು ನೋಡಿದರೂ ಜನರಿಗೆ ತೃಪ್ತಿಯಿಲ್ಲ. ನಕ್ಷತ್ರಗಳೊಳಗಿನ ಚಂದ್ರಮನಂತೆ, [illegible]

ದೇವೋತ್ತಮನಂತೆ, ಜನಸಮುದ್ರದ ಮಧ್ಯದಲ್ಲಿ ಶ್ರೀಮದಾಚಾರ್ಯರು ಶೋಭಿಸುತ್ತಿದ್ದರು.

ಹೀಗೆ ನೆರೆದ ಸಭೆಯಲ್ಲಿ ಒಬ್ಬ ಹಿರಿಯನು ಎದ್ದು ನಿಂತು ಆಚಾರ್ಯರಿಗೆ ಕೈಮುಗಿದು ಐತರೇಯ ಉಪನಿಷತ್ತಿನ ಸೂಕ್ತವೊಂದನ್ನೆಂದು 'ಭಗವನ್ ತಮ್ಮಿಂದ ಇದರ ಅರ್ಥವನ್ನು ಕೇಳಲು ಈ ಸಭೆಯು ಅಪೇಕ್ಷಿಸುತ್ತದೆ'' ಎಂದು ಹೇಳಿದನು. ಆಚಾರ್ಯರು ಐತರೇಯದ ಅರ್ಥವನ್ನು ಹೇಳಲು ಪ್ರಾರಂಭಿದರು. ಘನಗಂಭೀರವಾಣಿ, ಸ್ಪಷ್ಟ ಉಚ್ಚಾರ, ಸ್ವರ ಛಂದಸ್ಸುಗಳ ಜ್ಞಾನ ಮೊದಲಾದ ಗುಣಗಳನ್ನು ಕಂಡು ಜನಸಮೂಹವು ಚಿತ್ರದಲ್ಲಿಯ ಬೊಂಬೆಯಂತೆ ನಿಶ್ಚಲವಾಯಿತು. ಮಂದಮಾರುತನಿಂದ ಅಲ್ಲಾಡುವ ವನವೃಕ್ಷಗಳಂತೆ ಪಂಡಿತರು ತಲೆದೂಗುತ್ತಿದ್ದರು. ಪ್ರವಚನವು ಹೀಗೆ ಅವ್ಯಾಹತವಾಗಿ ನಡೆದ ಕಾಲಕ್ಕೇ ಮಧ್ಯದಲ್ಲೊಬ್ಬನು ಎದ್ದು " ಸ್ವಾಮೀ ಈ ಸೂಕ್ತಕ್ಕೆ ಹೀಗೂ ಅರ್ಥವಾಗುವದಿಲ್ಲವೆ? '' ಎಂದು ಆಚಾರ್ಯರನ್ನು ಕೇಳಿದನು. ಅವಕ್ಕೆ ಆಚಾರ್ಯರು " ಸರಿ; ಹಾಗೂ ಆಗುವದು. ಹೀಗೂ ಆಗುವದು. ವೇದಕ್ಕೆಲ್ಲ ಮೂರು ಅರ್ಥವಿವೆ ಮಹಾಭಾರತಕ್ಕೆ ಹತ್ತು ಅರ್ಥಗಳು. ವಿಷ್ಣುಸಹಸ್ರನಾಮಕ್ಕೆ ಮಾತ್ರ ನೂರು ರೀತಿಯಲ್ಲೀ ಅರ್ಥವಾಗುತ್ತದೆ'' ಎಂದು ಹೇಳಿದರು. ಇದನ್ನು ಕೇಳಿದೊಡನೆಯೇ ಆಚಾರ್ಯರನ್ನು ಗೆಲ್ಲಬೇಕೆಂದು ಆಪೇಕ್ಷೆಯುಳ್ಳ ಬ್ರಾಹ್ಮಣರು ಪರಿಹಾಸದಿಂದ " ಹೀಗಿದ್ದರೆ ಸಹಸ್ರನಾಮದ ಅರ್ಥಗಳನ್ನು ನಮಗೆ ಹೇಳಿರಿ'' ಎಂದು ಕೇಳಿದರು. ಇದನ್ನು ಕೇಳಿ ಅವರ ಮನೋಗತವನ್ನು ಅರಿತ ಸರ್ವಜ್ಞಾಚಾರ್ಯರು "ಸರಿ ನಾನು ಹೇಳುವೆನು. ಆದರೆ ಅದನ್ನೆಲ್ಲ ನೀವು ನನಗೆ ಮತ್ತೊಮ್ಮೆ ಹೇಳಬೇಕು.'' ಎಂದು ಹೇಳಲು ಅವಕ್ಕೆ ಅವರು ಒಪ್ಪಿದರು. ಹೇಳಿದ್ದನ್ನು ಮತ್ತೆ ಹೇಳುವದರಲ್ಲಿ ಅವರಿಗೆ ಅಂತಹದೇನೂ ಅಸಾಧ್ಯವೆನಿಸಲಿಲ್ಲ. ಅವರು ಲೇಖನ ಸಾಹಿತ್ಯವನ್ನು ಸಿದ್ಧಪಡಿಸಿಕೊಂಡು ಕುಳಿತರು. ಆಚಾರ್ಯರ ಮುಖದಿಂದ ಹೊರಟಕೂಡಲೆ ಅದನ್ನು ಬರಕೊಂಡು ಬಿಟ್ಟರೆ

ಆಯಿತೆಂಬುದೇ ಅವರ ವಿಚಾರ. ಶ್ರೀಮದಾಚಾರ್ಯರು ವಿಷ್ಣುಸಹಸ್ರನಾಮದ ಮೊದಲನೆಯ ವಿಶ್ವ ಶಬ್ದದ ಅರ್ಥವನ್ನು ಹೇಳಲು ಉಪಕ್ರಮಿಸಿದರು. ಹೇಳುವಾಗ ಶಬ್ದಕ್ಕೆ ಅನ್ವಯಿಸುವ ಪ್ರಕೃತಿಪ್ರತ್ಯಯ ಮೊದಲಾದ ರೂಪಗಳನ್ನು ವ್ಯಾಕರಣಶಾಸ್ತ್ರದಲ್ಲಿ ಹೇಳಿದಂತೆ ಬೇರೆ ಬೇರೆ ರೀತಿಯಿಂದ ವಿಂಗಡಿಸಿ ಹೇಳಹತ್ತಿದರು. ಹಾಗೆಯೇ ಇವರು ಹೇಳುವ ಪ್ರತಿಯೊಂದು ಅರ್ಥಕ್ಕೆ ಪ್ರಮಾಣವಾಗಿ ನೂರಾರು ವೇದವಾಕ್ಯಗಳನ್ನೂ ಸ್ಮೃತಿಗಳನ್ನೂ ಅನುವಾದಿಸಿದರು. ಹೀಗೆ ಅವ್ಯಾಹತವಾಗಿ ಆಚಾರ್ಯರು ಹೇಳಹತ್ತಿದರಿಂದ ಅಲ್ಲಿ ಕೂಡಿದವರಾರಿಗೂ ಅದನ್ನು ಬರೆದುಕೊಳ್ಳಲು ಶಕ್ಯವಾಗಲಿಲ್ಲ. ಪ್ರಳಯಕಾಲದ ನೀರನ್ನು ಬಾವಿಗಳಲ್ಲಿ ತುಂಬಿಡುವದು ಶಕ್ಯವೆ? ವಿಶ್ವಪದದ ನೂರು ಅರ್ಥಗಳು ಇನ್ನೂ ಮುಗಿದಿರಲಿಲ್ಲ* ಅಷ್ಟರಲ್ಲಿಯೇ ಅಲ್ಲಿ ನೆರೆದ ವಿದ್ವಾಂಸರೆಲ್ಲರು ಆಚಾರ್ಯರ ಪಾಂಡಿತ್ಯವನ್ನು ನೋಡಿ ಅಪ್ರತಿಭರಾದರು. ಕೂಡಲೆ ಆಚಾರ್ಯರಿಗೆ ವಂದಿಸಿ "ಸ್ವಾಮಿನ್ ದೇವತೆಗಳಲ್ಲಿಯೂ ಕಾಣದ ಬುದ್ಧಿವಂತಿಕೆಯು ತಮ್ಮಲ್ಲಿರುವದು. ನಮ್ಮಂಥ ಚಂಚಲ ಮನೋವೃತ್ತಿಯುವರು ತಮಗೆ ಮಾಡಿದ ಪರಿಹಾಸವನ್ನು ಕ್ಷಮಿಸಬೇಕು" ಎಂದು ಬೇಡಿಕೊಂಡರು.

ಮುಂದೆ ಕೇರಳ ಪ್ರಾಂತದಲ್ಲಿಂದ ಮುಂದೆ ಬರುವಾಗ ಮತ್ತೊಂದು ಊರಲ್ಲಿಯ ಒಂದು ಗುಡಿಯನ್ನು ಆಚಾರ್ಯರು ಹೊಕ್ಕರು. ಕೇರಳ ದೇಶದ ಪಂಡಿತರಿಗೆಲ್ಲ ಇವರು ನಮ್ಮನ್ನು ಅವಮಾನಗೊಳಿಸುವರೆಂದು ಆಚಾರ್ಯರ ವಿಷಯಕ್ಕೆ ಅಸೂಯೆಯಿಂದುಂಟಾದ ದ್ವೇಷ. ಪ್ರತ್ಯಕ್ಷ ವಾದಿಸುವ ಧೈರ್ಯವಿಲ್ಲ. ಆಂತೂ ಅಲ್ಲಿಯ ಪಂಡಿತರೆಲ್ಲರು ಕೂಡಿ ಎರಡನೇ ದೇಶದವನನ್ನು ಮುಂದೆ

---

***ಸೂಚನೆ:— ಹೀಗೆ ಶ್ರೀಮದಾಚಾರ್ಯರು ಹೇಳಿದ ವಿಷ್ಣುಸಹಸ್ರನಾಮದ ಮೊದಲನೆಯ ಶುಭನಾಮವಾದ ವಿಶ್ವ ಶಬ್ದಕ್ಕೆ ನೂರು ತರದ ಅರ್ಥವನ್ನು ಹಲಸಿಗೆಯ ಶ್ರೀ ಪಾಂಶ್ರಿ ಆಚಾರ್ಯರು ತಮ್ಮ ಜ್ಞಾನ್ಮೆಯಿಂದ ಬರದಿರುವರು. ಅದು ಅವರಲ್ಲಿ ನೋಡಲು ದೊರೆಯುತ್ತದೆ**

ಮಾಡಿದರು. ಅವನು ಮುಂದಾಗಿ ' ನ ವಾ ಉ ದೇವಾಃ ಕ್ಷುಧ ಮಿಧ್ವಧಂದದುಕುತಾ ಶಿತಾಮುಪಗಚ್ಛಂತಿ ಮೃತ್ಯವೆ" ಎಂಬ ಸೂಕ್ತದ ಅರ್ಥವನ್ನು ಕೇಳಿದನು. ಅದರ ಅರ್ಥ ಹೇಳಲು ಆಚಾರ್ಯರು ಉಪಕ್ರಮಿಸಿದರು. ಅದರಲ್ಲಿ ಬಂದ "ಪೃಣೀಯಾತ್" ಕ್ರಿಯಾಪದದ ಮೂಲ ಧಾತುವು "ಪೃಣ್" ಎಂದು ಆಚಾರ್ಯರು ಹೇಳಿದರು. ಕೂಡಲೆ ಇವರನ್ನು ಸೋಲಿಸುವ ಇಚ್ಛೆಯಿಂದ ಆ ಬ್ರಾಹ್ಮಣನು ಅದರ ಮೂಲ ಧಾತುವು "ಪೃಣ್" ಅಲ್ಲ "ಪ್ರೀಣ್" ಎಂದು ಹೇಳಿದನು. ಅದನ್ನು ಕೇಳಿ ಆ ಆಚಾರ್ಯರು ನಕ್ಕು "ಹುಚ್ಚಪ್ಪ ನಿನಗೆ 'ಪೃ' 'ಪ್ರ' ಇವುಗಳ ಭೇದವೇ ತಿಳಿಯುವದಿಲ್ಲ. ಹೋಗು ಅಕ್ಷರಗಳನ್ನು ಚನ್ನಾಗಿ ಕಲಿತುಕೊ" ಎಂದು ಅಂದರು. ಸಭೆಯೆಲ್ಲವೂ ಕೆಳಗೆ ಮೋರೆ ಹಾಕಿತು. ಆದರೆ ಮನಸಿನಲ್ಲಿ ಮಾತ್ರ "ಆಚಾರ್ಯರು ಸರ್ವಜ್ಞರು" ಎಂದು ನಿರ್ಧರಿಸಿತು.

ಹೀಗೆ ಆಚಾರ್ಯರು ಉತ್ತರ ದಿಕ್ಕಿಗೆ ಬರುತ್ತಿರುವಾಗ ಬೇರೊಂದು ದೇವಾಲಯದಲ್ಲಿ ಸಭೆ ನಡೆದಿದೆ. ಆಚಾರ್ಯರು ಮಧ್ಯದಲ್ಲಿ ಕುಳಿತಿರುವರು. ಕನ್ಯಾ ವಾರವಾಯತೀ ಸೋಮಮಪಿಸ್ರುತಾ ವಿದತ ಎಂಬ ವೇದಾರ್ಥವನ್ನು ಕೇಳುತ್ತಿರುವರು. ಆ ಕಾಲಕ್ಕೆ "ಅಪಾಲಾ" ಎಂಬ ಶಬ್ದಕ್ಕೆ ಆಚಾರ್ಯರು "ಅತಿತರುಣೀ" ಎಂದು ಹೇಳಿದರು. ಆದರೆ ಅಲ್ಲಿಯ ವಿದ್ವಾಂಸರಿಗೆ ಅದು ಒಪ್ಪಿತವಾಗಲಿಲ್ಲ. ಅವರು ಅದಕ್ಕೆ "ಶ್ವಿತ್ರಿಣಿ" ಎಂದು ಹೇಳುತ್ತಿರುವರು. ಹೀಗೆ ಈ ಶಬ್ದಾರ್ಥದ ಸಲುವಾಗಿ ಬಹು ವಿವಾದ ನಡೆದರೂ ನಿರ್ಣಯವಾಗದಂತಾಯಿತು. ಆಗ ಸಭಿಕರನ್ನು ಉದ್ದೇಶಿಸಿ "ಇನ್ನು ಸ್ವಲ್ಪೇ ಅವಧಿಯಲ್ಲಿ ಇಲ್ಲಿಗೆ ಪಂಡಿತರೊಬ್ಬರು ಬರುವರು. ಅವರಿಂದ ಈ ಶಬ್ದಾರ್ಥವನ್ನು ಕೇಳಿಕೊಳ್ಳಿರಿ" ಎಂದು ಹೇಳಿ ಶ್ರೀಮದಾಚಾರ್ಯರು ಮುಂದೆ ಪ್ರಯಾಣ ಮಾಡಿದರು. ಜನರೆಲ್ಲರೂ ಆಚಾರ್ಯರು ಹೇಳಿದ ಮಾತನ್ನು ನೆನಿಸಿ ಪಂಡಿತರ ದಾರಿಯನ್ನು ನೋಡುತ್ತಿರುವರು. ಆಚಾರ್ಯರು ಹೇಳಿದ ಸಮಯ ಬಂತು. ಆ ಪಂಡಿತರೂ ಅಲ್ಲಿಗೆ ಬಂದರು. ಜನರೆಲ್ಲ ಆಶ್ಚರ್ಯ ಚಕಿತರಾಗಿದ್ದಾರೆ. ಆಚಾರ್ಯರು

ಹೇಳಿದ ಲಕ್ಷಣಗಳೆಲ್ಲವೂ ಆ ಪಂಡಿತರಲ್ಲುಂಟು. ಕೂಡಲೆ ಶಬ್ದಾರ್ಥವನ್ನು ಜನರು ಕೇಳಿದರು. ಆಚಾರ್ಯರು ಹೇಳಿದ ಉತ್ತರವೇ ಪಂಡಿತರಿಂದ ಬಂತು. ಜನರಿಗೆಲ್ಲ ತುಂಬ ಕೌತುಕವಾಯಿತು. ಶ್ರೀಮದಾಚಾರ್ಯರು ಪಂಡಿತರು ಮಾತ್ರವಲ್ಲ; ಭೂತ ಭವಿಷ್ಯಜ್ಞಾನಿಗಳು ಎಂದು ತಮ್ಮತಮ್ಮೊಳಗೆ ಮಾತಾಡಿಕೊಳ್ಳುತ್ತ ನಿಶ್ಚಯಿಸಿದರು. ಹೀಗೆ ದಾರಿಯಲ್ಲಿಯ ಜನತೆಗೆಲ್ಲ ಜ್ಞಾನೋಪದೇಶ ಮಾಡುತ್ತ, ವಾದಿಗಳನ್ನು ಜಯಿಸುತ್ತ ಪೂರ್ಣಪ್ರಜ್ಞರು ಉಡುಪಿಗೆ ಬಂದು ಶ್ರೀ ಅನಂತೇಶ್ವರನಿಗೆ ವಂದಿಸಿದರು. ಆಚಾರ್ಯರು ಪ್ರವಾಸ ಮಾಡಿದ ಪ್ರದೇಶ ತೀರ ಸ್ವಲ್ಪವೇ ಇದ್ದರೂ ಇವರ ಕೀರ್ತಿಯು ಮಾತ್ರ ಎಲ್ಲ ಕಡೆಗೂ ಹಬ್ಬಿತು. ಸೂರ್ಯನು ಎಲ್ಲಿದ್ದರೂ ಅವನ ತೇಜಸ್ಸು ಎಲ್ಲ ಕಡೆಗೆ ಹಬ್ಬುವದು ಸ್ವಾಭಾವಿಕವಷ್ಟೇ!

## ಶ್ರೀಬಾದರಾಯಣರ ದರ್ಶನ.

ಶ್ರೀಮದಾಚಾರ್ಯರು ದಿಗ್ವಿಜಯವನ್ನು ಮುಗಿಸಿ ಉಡುಪಿಗೆ ಬಂದಿರುವರು. ಇವರ ಕೀರ್ತಿಯು ಭೂಮಂಡಲವನ್ನೆಲ್ಲ ವ್ಯಾಪಿಸಿದೆ ಅದರಿಂದ ಗುರುಗಳಿಗೂ ಶಿಷ್ಯರಿಗೂ ಆನಂದವಾಗಿದೆ. ಆದರೆ ಆಚಾರ್ಯರಿಗೆ ಮಾತ್ರ ತೃಪ್ತಿಯಿಲ್ಲ. ಮನದಲ್ಲಿಯೇ ಮರುಗುತ್ತಿರುವರು. ತಮ್ಮ ಪ್ರವಾಸದಲ್ಲಿಯ ಒಂದೊಂದೇ ದೃಶ್ಯವು ಅವರ ಕಣ್ಣು ಮುಂದೆ ಬರುತ್ತಿತ್ತು. ವೇದವನ್ನು ಎಲ್ಲರೂ ಮನ್ನಿಸುತ್ತಿದ್ದರು. ಆದರೆ ಆ ವೇದಾರ್ಥವು ವಿಪರೀತವಾಗಿತ್ತು. ಇದರಿಂದ ವೇದಗಳು ಗೋಳಿಟ್ಟು ಅಳುತ್ತಿದ್ದುದೂ ಆಚಾರ್ಯರ ಕಣ್ಣು ಮುಂದೆ ಬಾರದಿರಲಿಲ್ಲ. ಆಚಾರ್ಯರಿಗೆ ಕಡುತರ ದುಃಖವೆನಿಸಿತು. ದುಃಶಾಸನನು ದ್ರೌಪದೀದೇವಿಯ ಸೀರೆಯ ಸೆಳೆಯುವ ಕಾಲಕ್ಕೆ ಆದ ದುಃಖವೇ ಈಗಲೂ ಆಯಿತು. ಪ್ರತಿಜ್ಞೆ ಮಾಡಿದರು ಬೇರೆ ಭಾಷ್ಯ ಬರೆದು ಉಪನಿಷತ್ತುಗಳ ನಿಜಾರ್ಥವನ್ನು ಹೊರಗೆಡಹುವೆನೆಂದು. ಕೂಡಲೆ ಶ್ರೀ ವೇದವ್ಯಾಸರನ್ನು ಸ್ಮರಿಸಿ ಭಗವದ್ಗೀತೆಗೆ ಭಾಷ್ಯವನ್ನು ಬರೆದರು. ಬರೆದ ಭಾಷ್ಯವನ್ನು ಗುರುಗಳಿಗೆ ಕಾಣಿಕೆಯಾಗಿ ಕೊಟ್ಟು ತಾವು ಬದರೀ

ಕ್ಷೇತ್ರಕ್ಕೆ ಹೊರಡಲು ಗುರುಗಳನ್ನು ಕೇಳಿದರು. ಗುರುಗಳಿಗೆ ಸ್ವಲ್ಪ ವ್ಯಥೆ. ಆದರೂ ಆಚಾರ್ಯರನ್ನು ತಡೆಯಲಿಲ್ಲ. ಆಚಾರ್ಯರು ಹೊರಟರು. ದಾರಿಯಲ್ಲಿ ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ ಆ ತೀರ್ಥಗಳನ್ನು ಪವಿತ್ರಗೊಳಿಸುತ್ತ ಅಲ್ಲಲ್ಲಿಯ ಶ್ರೀಮನ್ನಾರಾಯಣನ ಮೂರ್ತಿಗಳಿಗೆ ವಂದಿಸುತ್ತ ಪಂಡಿತೋತ್ತಮರ ಸಭೆಗಳಲ್ಲಿ ಸಿದ್ಧಾಂತವನ್ನು ಪ್ರತಿಪಾದಿಸುತ್ತ ಮುಂದೆ ಮುಂದೆ ಸಾಗಿದರು. ಜಗತ್ರಯದಲ್ಲಿಯೇ ವಿಚಿತ್ರವಾದ ಇವರ ಕೆಲಸಗಳನ್ನು ನೋಡಿ ಜನರೆಲ್ಲ ಬೆರಗುಗೊಳ್ಳುತ್ತಿದ್ದರು. ಕೊನೆಗೆ ಜಗತ್ಪಾವನ ಸ್ವರೂಪಿಣಿಯಾದ ಗಂಗೆಯಲ್ಲಿ ಸ್ನಾನ ಮಾಡಿ ಬದರಿಕಾಶ್ರಮವನ್ನು ಕಂಡರು. ಭರತಖಂಡಕ್ಕೆ ಮಂಡನ ಸ್ವರೂಪನಾದ ಶ್ರೀಮನ್ನಾರಾಯಣನನ್ನು ಅರ್ಚಿಸುತ್ತ ಕೆಲವು ದಿನ ಅಲ್ಲಿಯೇ ವಾಸಮಾಡಿದರು.

ಒಂದು ದಿನ ಬೆಳಗಿನ ಜಾವು. ಆಚಾರ್ಯರು ಶೀತಲ ಗಂಗೆಯಲ್ಲಿ ಸ್ನಾನ ಮಾಡಿಕೊಂಡು ದೇವರೆದುರಿನಲ್ಲಿ ಕುಳಿತಿರುವರು. ಚಳಿಯ ಬೆದರಿಕೆಯಿಂದ ಶೀತಲ ಗಂಗೆಯ ನೀರನ್ನು ಮುಟ್ಟಲು ಕೂಡ ಅಂಜುವರು ಜನರು ಆಚಾರ್ಯರಿಗೆ ನಸುಕಿನಲ್ಲಿ ಅಲ್ಲಿ ಸ್ನಾನ ಮಾಡಿದರೂ ಚಳಿಯಿಲ್ಲ ತಮ್ಮ ನಿತ್ಯಕರ್ಮಗಳನ್ನು ತೀರಿಸಿಕೊಂಡು ಸ್ವಾಮಿಯ ಎದುರಿನಲ್ಲಿ ಕುಳಿತಿರುವರು. ಶಿಷ್ಯರೆಲ್ಲರನ್ನು ಹೊರಗೆ ಕಳಿಸಿದ್ದಾರೆ. ತಾವು ರಚಿಸಿದ ಭಗವದ್ಗೀತಾ ಭಾಷ್ಯವನ್ನು ಏಕಾಂತದಲ್ಲಿ ಶ್ರೀಮನ್ನಾರಾಯಣನಿಗೆ ಅರ್ಪಿಸಿ ಅದನ್ನು ಓದಲು ಮೊದಲು ಮಾಡಿದರು. ಮೊದಲನೇ ಶ್ಲೋಕವನ್ನು ಹೇಳಿದರು. ಆ ಶ್ಲೋಕದಲ್ಲಿದ್ದ ಅಭಿಪ್ರಾಯವು ದೇವನಿಗೆ ಸಮ್ಮತವಾಗಿರಲಿಲ್ಲ ಅದರಲ್ಲಿ "ನಮ್ಮ ಶಕ್ತಿಗೆ ಅನುಸಾರವಾಗಿ ಗೀತೆಯನ್ನು ವ್ಯಾಖ್ಯಾನ ಮಾಡುವೆವು" ಎಂದು ಇತ್ತು. ಇದರಲ್ಲಿಯ ಶಕ್ತಿಪದವು ಪ್ರಭುವಿಗೆ ಅಸಮ್ಮತವಾಯಿತು. ಕೂಡಲೆ "ಇದೇನು ? ಇದಕ್ಕೂ ಹೆಚ್ಚಿನ ಅರ್ಥವು ನಿನಗೆ ಗೊತ್ತಿಲ್ಲವೆ ? ಇದ್ದರೂ ಇಲ್ಲಿ ಸ್ವಲ್ಪ ಮಟ್ಟಿಗೆ ಮಾತ್ರ ಸಾಮಾನ್ಯ ಜನತೆಗೆ ಉಪಯೋಗವಾಗುವಂತೆ ಹೇಳುವೆ. ಹೀಗಿರಲು "ಶಕ್ತಿತಃ" ಎಂಬ ಶಬ್ದವು

ಹೇಗೆ ಯೋಗ್ಯವು? ಅದರ ಬದಲು ಅಲ್ಲಿ "ಲೇಶತಃ" (ಸ್ವಲ್ಪ ಮಟ್ಟಿಗೆ) ಎಂಬ ಪದವನ್ನು ಹಾಕು." ಎಂದು ಪ್ರಭುವಿನ ಆಜ್ಞೆಯಾಯಿತು. ಆಚಾರ್ಯರು ಎಲ್ಲವನ್ನು ಸಮರ್ಪಿಸಿದರು. ಆ ದಿನ ರಾತ್ರಿಯಲ್ಲಿ ಎಲ್ಲರೂ ಮಲಗಿರುವಾಗ, "ನೀನು ಮಾಡಿದ ಭಾಷ್ಯವನ್ನು ಶಿಷ್ಯರಿಗೆ ಹೇಳು" ಎಂದು ಶ್ರೀಮನ್ನಾರಾಯಣನು ಕೊಟ್ಟ ಅಪ್ಪಣೆಯ ಧ್ವನಿಯು ಸರ್ವರಿಗೂ ಸ್ಪಷ್ಟವಾಗಿ ಕೇಳಿಸಿತು ಭೂಮಿಯನ್ನು ಬಡಿದ ಸಪ್ಪಳವು ಎಲ್ಲರನ್ನೂ ಮೊದಲೇ ಎಚ್ಚರಿಸಿತ್ತು. ಆವತ್ತಿನಿಂದ ಶ್ರೀ ಗೀತಾಭಾಷ್ಯದ ಪ್ರವಚನಕ್ಕೆ ಆರಂಭವಾಯಿತು.

ಹೀಗೇ ಕೆಲವು ಕಾಲ ಅನಂತಮಠದಲ್ಲಿಯೇ ಹೋಗಿದೆ. ಆಚಾರ್ಯರು ಕಾಷ್ಠಮೌನವ್ರತವನ್ನು ಆರಂಭಿಸಿದ್ದಾರೆ. ಈ ವ್ರತದಲ್ಲಿ ಯಾವ ವ್ಯಾಪಾರವೂ ಇರುವದಿಲ್ಲ. ಹೀಗೆ ನಾಲ್ವತ್ತೆಂಟು ದಿನಗಳಾಗಿವೆ. ಒಂದು ದಿನ ಮಧ್ಯರಾತ್ರಿಯ ಸಮಯ. ಶಿಷ್ಯರು ಮಲಗಿರುವರು. ಆಚಾರ್ಯರು ಧ್ಯಾನದಲ್ಲಿ ನಿರತರಾಗಿರುವರು. ಒಮ್ಮೆಲೆ ಸೂರ್ಯ ಪ್ರಕಾಶವು ಬಿದ್ದಿದೆ. ವೇದವ್ಯಾಸರು ಬಂದು ಶ್ರೀಮದಾಚಾರ್ಯರಿಗೆ ತಮ್ಮ ಆಶ್ರಮಕ್ಕೆ ಬರಲು ಅಪ್ಪಣೆಕೊಟ್ಟರು. ಅಕಸ್ಮಾತ್ತಾಗಿ ಉಂಟಾದ ಬೆಳಕಿನಿಂದ ಎಲ್ಲರೂ ಎಚ್ಚತ್ತು ಎದ್ದು ನೋಡಿದರು. ಮೊದಲಿನಂತೆ ಕತ್ತಲೆ. ರಾತ್ರಿಯೂ ಹೆಚ್ಚಾಗಿತ್ತು. ಮರುದಿನ ಬೆಳಿಗ್ಗೆ ಆಚಾರ್ಯರು ಹೊರಟಿರುವರು. ಮೌನವ್ರತವಿದ್ದುದರಿಂದ ಶಿಷ್ಯರಿಗೆ ಏನೂ ಹೇಳುವಂತಿರಲಿಲ್ಲ. ಕೆಲವು ವಾಕ್ಯಗಳನ್ನು ಬರೆದಿಟ್ಟರು. "ಈ ಸ್ಥಳದಂಥ ಪವಿತ್ರ ಸ್ಥಾನವು ಭೂಮಂಡಲದಲ್ಲಿನ್ನೊಂದಿಲ್ಲ. ಈ ತೀರ್ಥಕ್ಕೆ ಸಮಾನ ತೀರ್ಥವೂ ಇಲ್ಲ. ವಿಷ್ಣುವಿಗೆ ಸಮಾನವಾದ ದೈವತವು ಅನ್ಯವಾವುದೂ ಇಲ್ಲ. ನಮ್ಮ ವಾಕ್ಯದಂಥ ಹಿತಕರವಾದ ಉಕ್ತಿಯೂ ಬೇರೊಂದಿಲ್ಲ. ಇದನ್ನು ನೆನಪಿನಲ್ಲಿಡಿರಿ. ನಾವಂತೂ ಈಗ ಶ್ರೀಬಾದರಾಯಣರ ಕಡೆಗೆ ಹೊರಟಿರುವೆವು. ಹಾಗೆ ಅವರ ಅಪ್ಪಣೆಯಾಗಿದೆ. ತಿರುಗಿ ಬರುವದು ಅಥವಾ ಬಾರದಿರುವದು ಆ ವ್ಯಾಸರಿಗೇ ಗೊತ್ತು; ನಮಗೆ ಗೊತ್ತಿಲ್ಲ. ನಿಮಗೆಲ್ಲ ಕಲ್ಯಾಣವಿರಲಿ. ನಮ್ಮ

ಮಾತು ನೆನಪಿನಲ್ಲಿರಲಿ." ಎಂದು ಬರೆದಿಟ್ಟು ಹೊರಟೇ ಬಿಟ್ಟರು. ಶಿಷ್ಯರಿಗೆ ವಿರಹವು ಅಸಹ್ಯವಾಯಿತು. ಮನದಲ್ಲಿ ಮರುಗಿದರು. ಆದರೆ ಗುರುಗಳ ಮುಂದೆ ಹೇಳಲು ಯಾರಿಗೂ ಧೈರ್ಯವಿಲ್ಲ. ಆಚಾರ್ಯರು ಹೊರಟಕೂಡಲೆ ಅವರ ಶಿಷ್ಯರಲ್ಲೊಬ್ಬರಾದ ಶ್ರೀಸತ್ಯತೀರ್ಥರೂ ಬೆನ್ನು ಹತ್ತಿದರು. ದುರ್ಗಮವಾದ ಮಾರ್ಗದಲ್ಲಿ ಆಚಾರ್ಯರು ಸಹಜವಾಗಿ ಕಲ್ಲಿನಿಂದ ಕಲ್ಲಿಗೆ ಲೀಲೆಯಿಂದ ಹಾರುತ್ತ ಹೊರಟರು ಸತ್ಯತೀರ್ಥರಿಗೆ ಅದು ಹೇಗೆ ಶಕ್ಯ? ಆದರೂ ಬೆನ್ನು ಬಿಡಲಿಲ್ಲ. ಕೊನೆಗೆ ಅವರಿವರಲ್ಲಿ ಬಹಳೇ ಅಂತರವಾಗಿದೆ. ಹೊತ್ತು ಮುಳುಗುತ್ತ ಬಂದಿತು. ಸತ್ಯತೀರ್ಥರು ದಣಿದು ಹೋಗಿರುವರು. ಆಚಾರ್ಯರು ಹಿಂತಿರುಗಿ ನೋಡಿದರು. ಶಿಷ್ಯನು ತಗ್ಗುತ್ತ ಮುಗ್ಗುತ್ತ ಬರುವದನ್ನು ಕಂಡು ಕನಿಕರಬಟ್ಟರು. ದೂರದಿಂದಲೇ ನೀನು ತಿರುಗಿ ಹೋಗೆಂದು ಕೈಸನ್ನೆ ಮಾಡಿದರು. ಅಷ್ಟುಮಾತ್ರದಿಂದ ಸತ್ಯತೀರ್ಥರು ತಿರುಗಿ ಮೊದಲಿದ್ದ ಅನಂತಮಠಕ್ಕೆ ಬಂದರು. ಸುತ್ತಲೂ ತಮ್ಮ ಸ್ನೇಹಿತರನ್ನು ನೋಡಿ ಆಶ್ಚರ್ಯಗೊಂಡರು. ಅವರು ತಮ್ಮ ಮಿತ್ರರಿಗೆ ಗುರುಗಳ ಅದ್ಭುತ ಗತಿಕ್ರಮವನ್ನೆಲ್ಲ ಹೇಳಿದರು. ಆಗ ಶ್ರೀಮದಾಚಾರ್ಯರು ವಾನರೇಂದ್ರ ಹನುಮಂತನಂತೆ, ನರೇಂದ್ರ ಭೀಮಸೇನನಂತೆ ತಮಗೆ ಕಂಡುದನ್ನೂ ಹೇಳಲು ಮರೆಯಲಿಲ್ಲ.

ಆಚಾರ್ಯರು ಹಿಮಾಲಯದ ಗಗನಚುಂಬಿತ ಶುಭ್ರಶಿಖರಗಳ ವನಶೋಭೆಯನ್ನೂ ಸುವರ್ಣಮಯ ಕೋಡುಗಲ್ಲುಗಳ ಅದ್ಭುತ ಸೊಗಸನ್ನೂ ಅವಲೋಕಿಸುತ್ತ ಮುಂದೆ ಸಾಗಿದರು. ಶ್ರೀ ವ್ಯಾಸರ ಆಶ್ರಮವು ದೂರದಲ್ಲಿ ಕಾಣುತ್ತಲೆ ಆಚಾರ್ಯರ ಮನದಲ್ಲಿ ಹೆಚ್ಚಿನ ಉತ್ಸುಕತೆಯುಂಟಾಗಿ ಅವರು ವಾಯುವೇಗದಿಂದ ಮುಂದೆ ಸಾಗುತ್ತಿರುವರು. ಆಶ್ರಮದಲ್ಲಿದ್ದ ಋಷಿಗಳು ತಮ್ಮ ಕಡೆಗೆ ವೇಗದಿಂದ ಬರುತ್ತಿರುವ ಆಚಾರ್ಯರನ್ನು ಕಂಡು ಸೋಜಿಗಗೊಂಡರು. ಯತಿರೂಪದಲ್ಲಿ ಬರುವ ಈ ಮಹಾಮಹಿಮರು ಚತುರ್ಮುಖಬ್ರಹ್ಮನು ಇಲ್ಲವೆ ವಾಯುವಾಗಿರಲಿಕ್ಕೆ ಬೇಕೆಂದು ನಿರ್ಧರಿಸಿದರು. ಇವರ ನಿರ್ಧಾರಕ್ಕೆ ಆಚಾರ್ಯರ ದೇಹ

ದಲ್ಲಿ ಕಾಣುವ ಸಂಪೂರ್ಣ ಸುಲಕ್ಷಣಗಳೇ ಕಾರಣ. ಶ್ರೀಮದಾಚಾರ್ಯರು ಮನದಲ್ಲಿ ಶ್ರೀಬಾದರಾಯಣರ ಪ್ರತಿಯೊಂದು ಅವಯವದ ಧ್ಯಾನಮಾಡುತ್ತ ನಡೆದಿದ್ದಾರೆ. ವಿಶಾಲವಾದ ಅಶ್ವತ್ಥವೃಕ್ಷವು ಮೊದಲು ಕಣ್ಣಿಗೆ ಬಿತ್ತು. ಆ ಮೇಲೆ ಅದರ ಪ್ರಶಸ್ತ ಕಟ್ಟೆ, ಕಟ್ಟೆಯ ಮೇಲೆ ಕುಳಿತಿರುವ ಮುನಿಗಳ ಸಮೂಹ. ಆ ಸಮೂಹ ಮಧ್ಯದಲ್ಲಿ ಶ್ರೀವೇದವ್ಯಾಸರು ಅಚಲಾಸನದಲ್ಲಿ ವಿರಾಜಮಾನರಾಗಿರುವರು. ಆಚಾರ್ಯರು ಅವರ ಸಮೀಪಕ್ಕೆ ಒಂದು ಭಕ್ತಿಭಾವದಿಂದ ಸಾಷ್ಟಾಂಗ ವಂದಿಸಿದರು. ಬಾದರಾಯಣರು ಅವರನ್ನೆಬ್ಬಿಸಿ ಗಾಢಾಲಿಂಗನದಿಂದ ಅವರನ್ನು ಸತ್ಕರಿಸಿದರು. ಇದನ್ನೆಲ್ಲ ನೋಡುತ್ತ ನಿಂತ ಋಷಿಗಳಿಗೆ ಅತ್ಯಂತ ಕೌತುಕವೆನಿಸಿತು. ವೇದವ್ಯಾಸರ ಗಾಢಾಲಿಂಗನ ಭಾಗ್ಯವು ಶ್ರೀಶುಕ ಮುನಿಗಳಿಗೂ ದೊರೆತದ್ದಿಲ್ಲ. ನೀಲಮೇಘಶ್ಯಾಮಲರಾದ ಶ್ರೀವೇದವ್ಯಾಸರೂ ಸುವರ್ಣವರ್ಣರಾದ ಶ್ರೀಮದಾನಂದತೀರ್ಥರೂ ಪರಸ್ಪರಾಲಿಂಗನಸುಖಸಂತೃಪ್ತರಾಗಿದ್ದ ದೈವೀದೃಶ್ಯವನ್ನು ಕಣ್ಣಾರೆ ಕಂಡ ಋಷಿಮುನಿಗಳು ಪ್ರಯಾಗಕ್ಷೇತ್ರದಲ್ಲಿ ಕಂಗೊಳಿಸುವ ಗಂಗಾಯಮುನಾ ಸಂಗಮದ ವಿಚಿತ್ರ ನೋಟವನ್ನು ನೆನಿಸಿಕೊಂಡು ಆನಂದಪುಲಕಿತರಾಗದಿರಲಿಲ್ಲ. ಸಾಕ್ಷಾತ್ ಬಾದರಾಯಣರಿಂದಾದ ಆಚಾರ್ಯರ ಈ ಸನ್ಮಾನವನ್ನು ಕಂಡು ಎಲ್ಲ ಮುನಿಗಳೂ ಇವರಿಗೆ ವಂದಿಸಿದರು. ಪರಸ್ಪರ ಕುಶಲ ಪ್ರಶ್ನಾದಿಗಳಾದ ಬಳಿಕ ಶ್ರೀವೇದವ್ಯಾಸರ ಅನುಜ್ಞೆಯಮೇರೆಗೆ ಅಲ್ಲಿಯೇ ಆಶ್ರಮದಲ್ಲಿ ಕೆಲಕಾಲ ವಾಸಮಾಡುವದನ್ನು ಶ್ರೀಮದಾಚಾರ್ಯರು ನಿಶ್ಚಯಿಸಿದರು. ಈ ಅವಧಿಯಲ್ಲಿ ಶ್ರೀಮದಾಚಾರ್ಯರು ಶ್ರೀವೇದವ್ಯಾಸರಿಂದ ಬ್ರಹ್ಮಸೂತ್ರಾರ್ಥಗಳನ್ನು ಅರಿತುಕೊಂಡು ತಾವು ಬರೆದ ಗೀತಾಭಾಷ್ಯವನ್ನು ಅವರೆದುರಿಗೆ ಓದಿದರು. ಮತ್ತು ಏಕಾಂತದಲ್ಲಿ ಎಲ್ಲ ತತ್ವರಹಸ್ಯಗಳನ್ನು ಅರಿತುಕೊಂಡರು.

ಹೀಗೆ ಶ್ರೀ ವ್ಯಾಸರ ಸನ್ನಿಧಿಯಲ್ಲಿಯೇ ಕೆಲವು ಕಾಲ ಹೋಗಿದೆ. ಮುಂದೆ ಶ್ರೀ ವೇದವ್ಯಾಸರು ಆಚಾರ್ಯರನ್ನು ಕೂಡಿಕೊಂಡೇ ನಾರಾಯಣಾಶ್ರಮಕ್ಕೆ ಹೋದರು. ಅಲ್ಲಿ ಜಟಾವಲ್ಕಲಗಳನ್ನು ಧರಿ..

ಮುನಿವೇಷದಲ್ಲಿದ್ದ ಶ್ರೀಮನ್ನಾರಾಯಣನನ್ನು ಕಂಡರು. ಕೂಡಲೆ ಆಚಾರ್ಯರಿಗೆ ನಾರಾಯಣನ ಬೇರೆ ಬೇರೆ ಅವತಾರಗಳ ಸ್ಮರಣೆಯಾಗದಿರಲಿಲ್ಲ. ಭಗವಂತನ ಈ ಎರಡೂ ರೂಪಗಳನ್ನು ಆಚಾರ್ಯರು ನೋಡಿ ತಾವೇ ಧನ್ಯರೆಂದು ತಿಳಿದರು. ಅಲ್ಲಿಯೂ ಅನೇಕ ತತ್ತ್ವಗಳ ಚರ್ಚೆ ನಡೆಯಿತು. ಆಚಾರ್ಯರಿಗೆ ಈ ಮಂಗಲ ಸಹವಾಸವನ್ನು ಬಿಟ್ಟು ತಿರುಗಿ ಹೋಗಬಾರದೆಂದೇ ಎನಿಸಿತು. ಆದರೆ "ಭೂಲೋಕದಲ್ಲಿದ್ದ ಅಜ್ಞಾನವನ್ನು ದೂರ ಮಾಡಿ ವೇದಗಳ ನಿಜಾರ್ಥವನ್ನು ಅರುಹಿ ಪರಮಾತ್ಮ ಜ್ಞಾನವನ್ನು ಪ್ರಸಾರಗೊಳಿಸೆಂ" ದು ಆಚಾರ್ಯರಿಗೆ ಶ್ರೀಮನ್ನಾರಾಯಣನೇ ಉಪದೇಶ ಮಾಡಿ ಆಜ್ಞೆಯನ್ನಿತ್ತನು. ತಮಗೆ ದೊರೆತ ಸತ್ಸಂಗವನ್ನು ಬಿಟ್ಟು ಹೋಗಲು ಆಚಾರ್ಯರ ಮನಸ್ಸು ಒಪ್ಪಲಿಲ್ಲ. ಕಲಿಕಾಲದ ಮೂಲಕ ದೇಶದಲ್ಲಿ ಸಜ್ಜನರ ಕೊರತೆಯಾಗಿದೆ; ತಾವು ತಿರಿಗಿ ಹೋಗುವದರಿಂದ ಫಲಿತಾರ್ಥವೇನೂ ದೊರೆಯಲಾರದೆಂಬದೇ ಶ್ರೀಮದಾಚಾರ್ಯರ ಹೇಳಿಕೆ. ಇದು ಭಗವಂತನಿಗೆ ಸರಿಹೋಗಲಿಲ್ಲ. "ಲೋಕದಲ್ಲಿ ಯಾವ ಕಾಲಕ್ಕೂ ಸಜ್ಜನರುಂಟು. ಆದರೆ ದುರ್ಜನರ ಪ್ರಾಬಲ್ಯವಾದಾಗ ಅವರು ಬೂದಿ ಮುಚ್ಚಿದ ಕೆಂಡದಂತೆ ಇರುವರು ನಿನ್ನಂಥ ವಾಯುವು ಅವತರಿಸಿ ಆ ಬೂದಿಯನ್ನು ಹಾರಿಸಿದಾಗ ಮಾತ್ರ ಸಜ್ಜನರು ತಮ್ಮ ತೇಜಸ್ಸಿನಿಂದ ದೇವಕಾರ್ಯ ಸಾಧನಕ್ಕೆ ಸಹಾಯಕರಾಗುವರು. ಆದುದರಿಂದ ಪುನಃ ನೀನು ಕರ್ಮಭೂಮಿಗಿಳಿದು ದಿವ್ಯಜ್ಞಾನೋಪದೇಶದಿಂದ ದೇವಕಾರ್ಯವನ್ನು ಮಾಡು" ಎಂದು ಶ್ರೀಮನ್ನಾರಾಯಣನು ವೇದವ್ಯಾಸರ ಸಮಕ್ಷಮ ಶ್ರೀಮದಾನಂದತೀರ್ಥರಿಗೆ ಅಪ್ಪಣೆ ಮಾಡಿದನು. ಶ್ರೀಮದಾಚಾರ್ಯರು ಈ ಆಜ್ಞೆಯನ್ನು ಶಿರಸಾವಹಿಸಿ ಶ್ರೀ ಬಾದರಾಯಣರೊಂದಿಗೆ ಹಿರಿಬದರಿಕಾಶ್ರಮಕ್ಕೆ ತಿರುಗಿ ಬಂದರು ಅಲ್ಲಿ ಮತ್ತೆ ಕೆಲವು ದಿನ ಇದ್ದು ಶ್ರೀಬಾದರಾಯಣರಿಂದ ಕೇಳಿಕೊಳ್ಳುವದನ್ನೆಲ್ಲ ಕೇಳಿಕೊಂಡು ಚಿಕ್ಕಬದರಿಗೆ ಹೊರಡಲನುವಾಗಿ ಶ್ರೀಬಾದರಾಯಣರಿಗೆ ವಂದಿಸಿದರು. ಎಲ್ಲರಿಗೂ ಇವರನ್ನು ಅಗಲುವದು ಬೇಡಾಗಿತ್ತು. ಇವರಿಗೂ ಅಲ್ಲಿರಬೇಕೆಂದೇ ಮನಸ್ಸು. ಆದರೂ ತಾವು

ಮಾಡಬೇಕಾದ ಮಹತ್ಕಾರ್ಯದ ಕಡೆಗೆ ಲಕ್ಷ್ಯಕೊಟ್ಟು ಅಲ್ಲಿಂದ ಹೊರಟು ಬದರೀ ಕ್ಷೇತ್ರಕ್ಕೆ ಬಂದು ಮಠದಲ್ಲಿನ್ನ ಶಿಷ್ಯರನ್ನು ಕಂಡರು. ಶಿಷ್ಯರು ಇವರ ದಾರಿಯನ್ನೇ ನೋಡುತ್ತ ಕುಳಿತಿದ್ದರು ಅಕಸ್ಮಿಕ ವಾಗಿ ಇವರನ್ನು ಕಂಡು ಎಲ್ಲರಿಗೂ ಅತ್ಯಂತ ಹರ್ಷವಾಯಿತು. ಅಗ್ನಿ ಶರ್ಮಾ ಮೊದಲಾದ ನಾಲ್ಕಾರು ಬ್ರಾಹ್ಮಣರು ತಮ್ಮ ತಮ್ಮ ಪರಿ ಯಾಗಿ ಇವರಿಗೆ ಊಟವನ್ನು ತಂದರು. ಎಲ್ಲರ ಮನದಲ್ಲಿಯೂ ತಾವು ತಂದ ಊಟವನ್ನು ಶ್ರೀಮದಾಚಾರ್ಯರು ಸ್ವೀಕರಿಸಬೇಕೆಂದು ಬಲವಾದ ಇಚ್ಛೆ, ಪ್ರೀತಿ. ಭಕ್ತಿ, ಇದರಿಂದ ಅವರೆಲ್ಲರೂ ಆಚಾರ್ಯರ ಮಾರ್ಗವನ್ನು ನೋಡಹತ್ತಿದರು. ಆಚಾರ್ಯರಿಗೆ ಎಲ್ಲರ ಮನೋಗ ತವು ತಿಳಿಯಿತು. ಅವರವರೂ ತಂದ ಊಟವನೆಲ್ಲ ಉಂಡರು ಅದರಿಂದ ಅವರಿಗೆಲ್ಲರಿಗೆ ಸೋಜಿಗವೆನಿಸಿತು. ಪಾಪ! ಅವರಿಗೇನು ಗೊತ್ತು? ಆಚಾರ್ಯರು ಈ ಜಗತ್ತನ್ನೇ ಪ್ರಲಯಕಾಲದಲ್ಲಿ ನುಂಗಿ ನೀರು ಕುಡಿ ಯಲು ಸಮರ್ಥರಾದ ವಾಯುದೇವರೆಂದು!!

ಹೀಗೆ ಶಿಷ್ಯರೊಂದಿಗೆ ಶ್ರೀಬದರೀನಾರಾಯಣನ ಸೇವೆಯಲ್ಲಿ ತತ್ಪ ರರಾಗಿ ಆಚಾರ್ಯರು ಅಲ್ಲಿಯೇ ಮತ್ತೆ ಕೆಲವು ದಿನ ಇದ್ದರು ದಿನಾಲು ನಿಯಮದಂತೆ ಪಾಠಪ್ರವಚನಗಳಂತೂ ನಡೆಯುತ್ತಲೇ ಇದ್ದವು. ಇದೇ ಕಾಲಕ್ಕೆ ಶ್ರೀಬ್ರಹ್ಮಸೂತ್ರಗಳಿಗೆ ಭಾಷ್ಯ ಬರೆಯುವ ದನ್ನು ನೆನೆದರು. ಆದಕ್ಕೆ ಭಗವಂತನ ಅಪ್ಪಣೆಯೂ ದೊರೆಯಿತು. ಕೂಡಲೆ ಆಚಾರ್ಯರು ದಿನಾಲು ಸೂತ್ರಾರ್ಥವನ್ನು ಹೇಳುತ್ತಿ ದ್ದರು ಅವರ ಶಿಷ್ಯರಾದ ಸತ್ಯತೀರ್ಥರು ಅದನ್ನು ಬರೆಯುತ್ತಿದ್ದರು. ಸತ್ಯತೀರ್ಥರು ಪೂರ್ವಜನ್ಮದಲ್ಲಿ ಸಂಪಾದಿಸಿದ ಪುಣ್ಯವೆಂತಹದೊ! ಸೂತ್ರಭಾಷ್ಯದ ಒಂದೊಂದು ಅಕ್ಷರವನ್ನು ಬರೆಯುವದೆಂದರೆ ಪತಿತ ಪಾವನಿಯಾದ ಭಾಗೀರಥಿಯ ಪ್ರಚಂಡ ಪ್ರವಾಹದಲ್ಲಿ ಶ್ರೀವಿಷ್ಣು ಮಂದಿರವನ್ನು ಕಟ್ಟುವಂತೆ ಎಂದು ಎಲ್ಲರೂ ಒಪ್ಪುವರು. ಸಂಪೂರ್ಣ ಭಾಷ್ಯವು ಬರೆದಾಯಿತು. ಎಲ್ಲಿಯೂ ದೋಷವಿಲ್ಲ. ಸ್ಖಾಲಿತ್ಯವಿಲ್ಲ. ಎಲ್ಲೆಡೆಯಲ್ಲಿಯೂ ಗುಣಪೂರ್ಣನಾದ ಶ್ರೀವಾಸುದೇವನ ಸ್ತುತಿಯು ತುಂಬಿದೆ. ಭಾಷ್ಯವನ್ನು ಶ್ರೀ ನಾರಾಯಣನಿಗೆ ಅರ್ಪಿಸಿದರು. ನಾರಾ

ಯಣವು "ಪುನಶ್ಚ ಕರ್ಮಭೂಮಿಗೆ ಹೊರಡೆಂದು" ತಾನು ಮೊದಲು ಮಾಡಿದ ಆಜ್ಞೆಯ ನೆನಪು ಕೊಟ್ಟನು. ಶ್ರೀಮದಾಚಾರ್ಯರು ಕೂಡಲೆ ಹೊರಡಲನುವಾದರು.

## ಭಾಷ್ಯ ಪ್ರವಚನ.

ಹಿಮಗಿರಿಯಿಂದ ಶಿಷ್ಯಪರಿವಾರದೊಂದಿಗೆ ಇಳಿದು ಶ್ರೀಮದಾಚಾರ್ಯರು ಒಡ್ಡೀಜಗನ್ನಾಥನನ್ನು ನೋಡಿಕೊಂಡು ಅನೇಕ ದೇಶಗಳನ್ನು ದಾಟಿ ಗೋದಾವರೀ ತೀರಕ್ಕೆ ಬಂದಿರುವರು ಎಂದಿನಂತೆ ಅಲ್ಲಿಯೂ ಸಭೆ ನೆರೆದಿದೆ. ಪರಿಷತ್ತಿನಲ್ಲಿ ಹದಿನೆಂಟು ಶಾಖೆಗಳ ಪಂಡಿತರೂ ಕೂಡಿರುವರು. ಅವರೆಲ್ಲರೂ ತಮ್ಮ ತಮ್ಮ ಶಾಖೆಗಳ ವೇದ ವೇದಾಂಗ ಪಾರಂಗತರು· ಅವರೆಲ್ಲರೂ ಆಚಾರ್ಯರಿಗೆ ತಮ್ಮ ಶಾಖೆಯ ವೇದಾರ್ಥವನ್ನು ಕೇಳಿದರು. ಆಚಾರ್ಯರು ಅನಾಯಾಸವಾಗಿ ಎಲ್ಲರನ್ನೂ ಸಮಾಧಾನ ಪಡಿಸಿದರು. ಅವರೆಲ್ಲರಿಗೂ ಆಚಾರ್ಯರು ಸರ್ವಜ್ಞರೆಂಬುದು ಮನಗಂಡು ಹೋಯಿತು. ಕೂಡಲೆ ಅವರು ಆಚಾರ್ಯರಿಗೆ "ಸರ್ವಜ್ಞಾಚಾರ್ಯರೆಂ" ದು ಕರೆದರು ಈ ಪಂಡಿತರಿಗೆಲ್ಲರಿಗೂ ವೇದೋಪನಿಷತ್ತುಗಳನ್ನೂ ಧರ್ಮ, ಕರ್ಮ, ಬ್ರಹ್ಮಮೀಮಾಂಸಾ ಶಾಸ್ತ್ರಗಳನ್ನೂ ಕಲಿಸುವ ವಿದ್ವಾಂಸರು ಆ ಕಾಲಕ್ಕೆ ಇಬ್ಬರು ಇದ್ದರು. ಒಬ್ಬರು ಶೋಭನಭಟ್ಟರು. ಇನ್ನೊಬ್ಬರು ಶಾಮುಶಾಸ್ತ್ರಿಗಳು. ಅವರು ಬ್ರಹ್ಮಸೂತ್ರಗಳ ಬೇರೆ ಭಾಷ್ಯಗಳನ್ನು ಓದಿದ್ದರೂ ಅವರಿಗೆ ಸಮಾಧಾನವಿಲ್ಲದೇ ಅವುಗಳನ್ನು ಖಂಡಿಸಿದ್ದರು. ಆದರೆ ಬೇರೆ ಮಾರ್ಗವೆ ಅವರಿಗೆ ದೊರೆತಿರಲಿಲ್ಲ. ಶ್ರೀಸರ್ವಜ್ಞಾಚಾರ್ಯರ ಭಾಷ್ಯವನ್ನು ನೋಡಿದರು. ಆಚಾರ್ಯರಿಂದ ಕೇಳಿದರು. ಉಪ್ಪು ನೀರು ಕುಡಿದ ಮನುಷ್ಯನು ಅಮೃತವನ್ನು ಕುಡಿದು ತೃಪ್ತಿಬಡುವಂತೆ ಸಂತುಷ್ಟರಾದರು. ಬಲಮುಡಿ ಶಂಖವನ್ನು ಸುಣ್ಣ ಮಾಡಿ ತಿನ್ನುವದು, ಆ ಶಂಖವನ್ನು ಮಾರಿಕೊಂಡು ಹಣದೊರಕಿಸುವದು, ಅಥವಾ ಆದನ್ನು ಪೂಜಿಸಿ ಅತ್ಯಂತ ಲಾಭವನ್ನು ಪಡೆಯುವದು. ಈ ಮೂರ ಕೃತಿಗಳಲ್ಲಿ ಯಾವ ತಾರತಮ್ಯವು ಕಂಡು ಬರುವದೋ? ಅದೇ ತಾರ




ಪ್ರವಚನ ಪುಟ ೪೦

ತಮ್ಮವು ಶ್ರೀಮದಾಚಾರ್ಯರ ಭಾಷ್ಯವನ್ನು ಕೇಳಿಬಿಡುವದು, ಮನನ ಮಾಡಿ ತಿಳಿದುಕೊಳ್ಳುವದು, ತಿಳಿದುಕೊಂಡು ಆದರಲ್ಲಿ ಹೇಳಿದಂತೆ ನಡೆಯುವದು ಇವುಗಳಲ್ಲಿ ಕಂಡುಬರುತ್ತದೆ ಎಂದು ಮೊದಲಾಗಿ ಶೋಭನಭಟ್ಟರು ಬಲು ಸರಸವಾದ ಕಾವ್ಯವಾಣಿಯಿಂದ ಜನತೆಗೆಲ್ಲ ಭಾಷ್ಯದ ಹೆಚ್ಚಳವನ್ನು ಹೇಳಿದರು. ಹೀಗೆ ಆಚಾರ್ಯರು ತಮ್ಮ ಸಮೀಪಕ್ಕೆ ಬಂದ ಜನರನ್ನೆಲ್ಲ ವಾಗಮೃತವೃಷ್ಟಿಯಿಂದ ಸಂತೋಷ ಗೊಳಿಸಿದರು. ಆದರೆ ಎಲ್ಲ ಕಡೆಗೆ ಸಮನಾಗಿ ಮಳೆಯಾದರೂ ತಗ್ಗಿನಲ್ಲಿ ಮಾತ್ರ ನೀರು ನಿಲ್ಲುವದಲ್ಲವೆ? ಆಚಾರ್ಯರಲ್ಲಿ ಭಕ್ತಿಯಿದ್ದವರು ಮಾತ್ರ ತೃಪ್ತರಾದರು. ಉಳಿದವರು ನಿರ್ಲಿಪ್ತರಾಗಿಯೇ ಉಳಿದರು. ಸರ್ವಜ್ಞಾಚಾರ್ಯರು ಈ ರೀತಿ ದಿಗ್ವಿಜಯವನ್ನು ಮುಗಿಸಿಕೊಂಡು ಉಡುಪಿಗೆ ಬಂದರು. ಶ್ರೀಮದನಂತೇಶ್ವರನಿಗೆ ವಂದಿಸಿದರು. ಗುರುಗಳಿಗೂ ಅಭಿವಂದಿಸಿದರು. ಕೀರ್ತಿಮಂತರಾದ ಶಿಷ್ಯಶ್ರೇಷ್ಠರನ್ನು ಕಂಡು ಗುರುಗಳೂ ಅತ್ಯಂತ ಹರುಷಗೊಂಡರು.

ಅಚ್ಯುತಪ್ರೇಕ್ಷರ ಜೊತೆಗೆ ಜ್ಯೇಷ್ಠ ಯತಿಗಳೂ ಇದ್ದರು. ಅವರು ಶ್ರೀಮದಾಚಾರ್ಯರು ರಚಿಸಿದ ಭಾಷ್ಯವನ್ನು ನೋಡಿದರು. ಅದು ದೋಷರಹಿತವೆಂದು ಮನಗಂಡರು. ಆದರೆ ಅಚ್ಯುತಪ್ರೇಕ್ಷರಿಗೆ ಮಾತ್ರ ಮೊದಲಿನ ಮೋಹವು ಇನ್ನೂ ದೂರಾಗಿರಲಿಲ್ಲ. ಈ ಭಾಷ್ಯದ ಮೇಲೆ ಅವರ ವಿಶ್ವಾಸ ಕೂಡಲೊಲ್ಲದು. ಆಚಾರ್ಯರಿಗೂ ಅಚ್ಯುತಪ್ರೇಕ್ಷರಿಗೂ ಪ್ರೇಮವಿವಾದವು ಪ್ರಾರಂಭವಾಯಿತು. ಇದಕ್ಕೆ ವಿವಾದವೆನ್ನುವದಕ್ಕಿಂತ ಚರ್ಚೆಯೆನ್ನುವದೇ ಲೇಸು. ಈ ಚರ್ಚೆಯಲ್ಲಿ ಅಚ್ಯುತಪ್ರೇಕ್ಷರು ನಿರುತ್ತರರಾಗುತ್ತ ಬಂದರು. ಶ್ರೀಮದಾಚಾರ್ಯರ ಉಕ್ತಿಯಲ್ಲಿ ಅವರಿಗೆ ವಿಶ್ವಾಸವೂ ಹುಟ್ಟುತ್ತ ಬಂದಿತು. ಆಚಾರ್ಯರು ವಿನಯದಿಂದ ಅವರ ಮನದಲ್ಲಿಯ ಸಂಶಯಗಳನ್ನು ಸಮೂಲ ಕಿತ್ತು ಹಾಕಿದರು. ಶಿಷ್ಯರಿಗೆಲ್ಲರಿಗೂ ತಪ್ತಮುದ್ರಾಧಾರಣಕ್ರಮವೂ ಪ್ರಾರಂಭವಾಯಿತು.

## ಶ್ರೀಕೃಷ್ಣ ಸ್ಥಾಪನೆ

ಇದೇ ಸಮಯದಲ್ಲಿ ವಿಷ್ಣುಪ್ರತಿಮೆಯೊಂದನ್ನು ಸ್ಥಾಪಿಸಬೇಕೆಂದು ಶ್ರೀಮದಾಚಾರ್ಯರ ಮನವಲ್ಲಿ ಬಂದಿದೆ. ಒಂದು ದಿನ ಮುಚ್ಚಂಜೆಯ ಹೊತ್ತು, ಸೂರ್ಯನು ಅರ್ಧ ಅಸ್ತನಾಗಿರುವನು. ಆಚಾರ್ಯರು ನಿಯಮಾನುಷ್ಠಾನಕ್ಕೆಂದು ಸಮುದ್ರತೀರಕ್ಕೆ ಬಂದಿರುವರು. ಅಂದು ಶ್ರೀಕೃಷ್ಣಪ್ರತಿಮೆ ದೊರೆಯುವದೆಂದು ತಿಳಿದು ಅವನನ್ನು ಸ್ತೋತ್ರಮಾಡುತ್ತ ಹೊರಟಿದ್ದರು. ಐದು ಅಧ್ಯಾಯಗಳು ಮುಗಿದಿವೆ. ಅಷ್ಟರಲ್ಲಿ ಸಮುದ್ರದಲ್ಲಿ ಒಂದು ಹಡಗವು ದಂಡೆಯ ಕಡೆಗೆ ಬರುತ್ತಿರುವದು ಕಂಡಿತು. ಅದು ಸ್ವಲ್ಪ ದೂರಲ್ಲಿರುವಾಗ ಬಿರುಗಾಳಿ ಬಿಟ್ಟಿದೆ. ತುಸು ಹೊತ್ತು ಮೊದಲು ಶಾಂತವಾಗಿದ್ದ ಸಮುದ್ರವು ಕ್ರೂರ ಸ್ವರೂಪವನ್ನು ತಳೆದಿದೆ. ತೆರೆಗಳ ಹೊಡತಕ್ಕೆ ಹಡಗವು ಹೊಯಿದಾಡಹತ್ತಿದೆ. ಹಡಗದೊಳಗಿನ ಜನವೆಲ್ಲ ಜೀವದಾಶೆಗೆ ಗೋಳಿಟ್ಟು ಅಳುವ ಧ್ವನಿಯಿಂದ ವಾತಾವರಣದಲ್ಲೆಲ್ಲ ಹಾಹಾಕಾರ ತುಂಬಿದೆ. ಆಚಾರ್ಯರು ಇದನ್ನೆಲ್ಲ ಕಂಡು ಕನಿಕರಬಟ್ಟರು. ಈ ಸಂಸಾರವು ಹೀಗೇ ಇದ್ದರೂ ಜನರು ಹೇಗೆ ಮೋಸಹೋಗುವರೆಂದಂದು ಮನನೊಂದರು. ಜನತೆಯ ಆರ್ತಧ್ವನಿಯು ಆಚಾರ್ಯರ ಹೃದಯವನ್ನು ಕರಗಿಸದಿರಲಿಲ್ಲ. ಕೂಡಲೆ ಆಚಾರ್ಯರು ಶಾಟಿಯಿಂದ ಸನ್ನೆಮಾಡಿ ಹಡಗವನ್ನು ಕರೆದರು. ಹಡಗವು ನೀಟಾಗಿ ದಂಡೆಗೆ ಬಂತು. ಎಲ್ಲರಿಗೂ ಅತ್ಯಂತ ಹರ್ಷವಾಗಿದೆ. ಹಡಗದ ಯಜಮಾನನು ಬಂದು ಪ್ರಾಣಸಂಕಟದಿಂದ ಪಾರಾದ ಕೃತಜ್ಞತೆಯಿಂದ ಆಚಾರ್ಯರ ಕಾಲುಗಳ ಮೇಲೆ ಬಿದ್ದು ಕಣ್ಣೀರಿನಿಂದ ಕಾಲು ತೊಳೆದನು. "ಸ್ವಾಮೀ ತಮ್ಮ ಸೇವೆಯನ್ನು ಏನು ಮಾಡಲಿ" ಎಂದು ಕೇಳಿದನು ಆಚಾರ್ಯರು ಅವನ ಭಕ್ತಿಯನ್ನು ಕಂಡು ಮೆಚ್ಚಿದರು. "ನನಗೇನೂ ಬೇಡ; ನಿನ್ನ ನೌಕೆಯಲ್ಲಿ ಗೋಪೀಚಂದನದ ಪೆಂಟೆಯೊಂದಿದೆ. ಅದನ್ನು ಕೊಡು"ಎಂದರು. ಯಜಮಾನನಿಗೆ ಆಚಾರ್ಯರ ಮಾತಿನಲ್ಲಿ ನಂಬಿಗೆಯಾಗಲೊಲ್ಲದು. ಆಚಾರ್ಯರು ಮತ್ತೊಮ್ಮೆ

ಅದನ್ನೇ ಹೇಳಿದರು. ಕೂಡಲೆ ನೌಕೆಯ ನಾಯಕನು ಹಡಗದಲ್ಲಿದ್ದ ಗೋಪೀಚಂದನದ ಪೆಂಟೆಯನ್ನು ಆಚಾರ್ಯರ ಮುಂದೆ ಇಡಿಸಿದನು. ಜನರೆಲ್ಲರೂ ಮುಂದೇನು ಮಾಡುವರೋ ಎಂದು ಕುತೂಹಲದಿಂದ ನೋಡಹತ್ತಿದರು. ಆಚಾರ್ಯರು ಆ ಪೆಂಟೆಯನ್ನು ಶಿಷ್ಯರ ಕಡೆ ಯಿಂದ ಉಡುಪಿಯ ಊರೊಳಗೆ ತೆಗೆದುಕೊಂಡು ಬಂದು ಅದನ್ನು ನೀರೊಳಗೆ ತೊಳೆಯಿರೆಂದು ಶಿಷ್ಯರಿಗೆ ಆಜ್ಞೆ ಮಾಡಿದರು. ಕೂಡಲೆ ಶಿಷ್ಯರು ಆ ಪೆಂಟೆಯನ್ನು ಮಧ್ವಸರೋವರದಲ್ಲಿ ತೊಳೆಯಲು ಒಳಗೆ ಮಥನದಂಡನವನೀತ ಧಾರಿಯಾದ ಶ್ರೀಕೃಷ್ಣ ಪ್ರತಿಮೆಯು ಇದ್ದುದನ್ನು ಕಂಡು ಜನರೆಲ್ಲರೂ ಸೋಜಿಗಬಟ್ಟು ಬೆರಗಾದರು. ಆಗ ಶ್ರೀಮದಾಚಾರ್ಯರು "ಇದು ಸಾಕ್ಷಾತ್ ರುಕ್ಮಿಣಿದೇವಿಯರ ಕರ ಕಮಲಾರ್ಚಿತವಾದ ಬಾಲಕೃಷ್ಣ ಮೂರ್ತಿಯ ವಿಗ್ರಹವು" ಎಂದು ಜನರಿಗೆ ತಿಳಿಸಿ ಮತ್ತೆ ಶ್ರೀಕೃಷ್ಣಪರಮಾತ್ಮನನ್ನು ಸ್ತುತಿಸಹತ್ತಿದರು. ಹೀಗೆ ಏಳು ಅಧ್ಯಾಯಗಳ ಸ್ತೋತ್ರವು ಈಗ ಮುಗಿಯಲು ಗೋಪಿ ಕಾಪ್ರಣಯಿಯಾದ ನಂದನಂದನಶ್ರೀಕೃಷ್ಣನ ಆ ಬಾಲರೂಪ ವಿಗ್ರ ಹವನ್ನು ಅಲ್ಲಿಯೇ ಪ್ರತಿಷ್ಠೆಮಾಡಿದರು ಈವತ್ತಿಗೂ ಜನತೆಯು ಆ ಮಧ್ವಸರೋವರದಲ್ಲಿ ಸ್ನಾನ ಮಾಡಿ ಆ ಮಂದಹಾಸ ಮಾತ್ರದಿಂದ ಜಗತ್ತಿನ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುವ ರುಕ್ಮಿಣೀವಲ್ಲಭ ಶ್ರೀಕೃಷ್ಣನನ್ನು ಸಂದರ್ಶಿಸಿ ಪವಿತ್ರರಾಗುವರಲ್ಲದೆ ಕೃತ ಕೃತ್ಯರಾಗು ವರು. ಆಚಾರ್ಯರು ಸಮುದ್ರತೀರದಲ್ಲಿ ಮಾಡಿದ ೫ ಅಧ್ಯಾಯಗಳ ಶ್ರೀಕೃಷ್ಣಸ್ತುತಿಯೂ ಪ್ರತಿಷ್ಠಾಕಾಲಕ್ಕೆ ಮಾಡಿದ ಈ ೭ ಅಧ್ಯಾಯ ಗಳ ಸ್ತುತಿಯೂ ಕೂಡಿಕೊಂಡು ದ್ವಾದಶಾಧ್ಯಾಯ ಸಮನ್ವಿತವಾದ "ದ್ವಾದಶ ಸ್ತೋತ್ರ"ವಾಗಿ ಮಾಧ್ವಸಾಂಪ್ರದಾಯಿಗಳಲ್ಲಿ ಮನೆವಾ ರ್ತೆಯ ಸ್ತೋತ್ರವಾಗಿದೆ. ಹೃಷೀಕೇಶತೀರ್ಥರು ಇದನ್ನು ಅದೇ ಕಾಲಕ್ಕೆ ಬರೆದರು. ಈ ಮೂಲ ಪ್ರತಿಯು ಇಂದಿಗೂ ಉಡುಪಿಯ ಪಲಮಾರಮಠದಲ್ಲಿ ದೊರೆಯುತ್ತದೆ. ಆದರೆ ಈಗಿನ ೭ ನೆಯ ಅಧ್ಯಾ ಯವು ಅದರಲ್ಲಿ ಹನ್ನೆರಡನೆಯದಾಗಿದೆ.

ಸರ್ವಜ್ಞಾಚಾರ್ಯರ ಅನುಜರು ಸೋಮಯಾಗವನ್ನು ಪ್ರಾರಂಭಿಸಿದ್ದರು. ಅದರಲ್ಲಿ ವಿಘ್ನ ಮಾಡಬೇಕೆಂದು ಕೆಲವರ ಬಯಕೆ. ಈ ವಿರೋಧಿಗಳಿಗೆ ಪ್ರಮುಖನಾಗಿದ್ದ ಮುದಿಭಟ್ಟನು (ಜರಾಘಟಿತಗೋತ್ರನು) ಮುಂದೆ ಬಂದನು. ಇದನ್ನು ತಿಳಿದು ಆಚಾರ್ಯರೂ ಅಲ್ಲಿಗೆ ಹೋದರು. ಅವನೊಂದಿಗೆ ವಾದ ಮಾಡಿದರು. ಕೂಡಲೆ ಅವನು ಸೋತು ಆಚಾರ್ಯರಿಗೆ ವಂದಿಸಿದನು. ಅನುಜರ ಯಜ್ಞವು ನಿರ್ವಿಘ್ನವಾಗಿ ಸಾಗಿತು. ಯಜ್ಞವು ನಡೆದ ಕಾಲಕ್ಕೆ ಕರ್ಮಕಾಂಡ ವಿಷಯಕ ಅನೇಕ ಚರ್ಚೆಗಳು ನಡೆಯುವದು ಸ್ವಾಭಾವಿಕವು. ಯಜ್ಞದಲ್ಲಿ ಪಿಷ್ಟಪಶುವೇ ಯೋಗ್ಯವೆಂದೂ ನಿರ್ಣಯವಾದುದರಲ್ಲಿ ಆಶ್ಚರ್ಯವಿಲ್ಲ. ಶ್ರೀಮದಾಚಾರ್ಯರು ಹೀಗೆ ನಡಿಸಿದ ತಮ್ಮ ಅನೇಕ ವಿಚಿತ್ರ ಲೀಲೆಗಳಿಂದ ಜನರಲ್ಲಿ ಅವರ ವಿಷಯವಾಗಿ ಭಕ್ತಿಯೂ ಶ್ರದ್ಧೆಯೂ ವಿಶ್ವಾಸವೂ ಹುಟ್ಟಿದವಲ್ಲದೆ ಆಚಾರ್ಯರ ಕೀರ್ತಿಯೂ ದಿಗಂತರವನ್ನು ವ್ಯಾಪಿಸಿತು.

## ತೀರ್ಥಯಾತ್ರೆ.

ಕೆಲವು ಕಾಲದ ತರುವಾಯ ಶ್ರೀ ಪೂರ್ಣಪ್ರಜ್ಞರಿಗೆ ಮತ್ತೆ ಶ್ರೀ ವೇದವ್ಯಾಸರ ದರ್ಶನಲಾಲಸೆಯಾಗಿ ಬದರಿಕಾಶ್ರಮಕ್ಕೆ ಹೊರಡುವ ಅಪೇಕ್ಷೆಯಾಗಿದೆ. ಕೂಡಲೆ ಶಿಷ್ಯರೊಂದಿಗೆ ಹೊರಟರು. ದಾರಿಯಲ್ಲಿ ಒಂದೆಡೆಗೆ **ಈಶ್ವರದೇವ**ನೆಂಬ ಪಾಳೆಗಾರನೊಬ್ಬನು ಕೂಲಿಕಾರರಿಂದ ಭೂಮಿಯನ್ನು ಅಗಿಸುತ್ತಿದ್ದನು. ಆಚಾರ್ಯರು ಬರುವದನ್ನು ನೋಡಿ ಅವನಿಗೆ ಏನೋ ಸೋಜಿಗವೆನಿಸಿ ಕುಚೇಷ್ಟೆಗೆ ಪ್ರಾರಂಭಮಾಡಿದನು. "ಎಲೋ ಸಂನ್ಯಾಸಿಯೇ ನೀನೂ ಅಗಿಯಲು ಬಾ" ಎಂದು ಕರೆದನು. ಕೂಡಲೆ ಆಚಾರ್ಯರು ಅವನ ಹತ್ತರ ಹೋಗಿ "ನಾವು ಅಗಿಯುವೆವು. ಆದರೆ ಹೇಗೆ ಅಗಿಯಬೇಕೆಂಬುದು ನಮಗೆ ಗೊತ್ತಿಲ್ಲ. ನೀನು ಅಗಿದು ತೋರಿಸು" ಎಂದರು. ಈಶ್ವರದೇವನು ಇವರಿಗೆ ಅಗಿಯುವ ರೀತಿಯನ್ನು ತೋರಿಸಲು ಪ್ರಾರಂಭಮಾಡಿದನು. ಆದರೆ ಬಿಡುವದು ಅವನ ಸ್ಮೃತಿಯಲ್ಲಿರಲಿಲ್ಲ. ಸಂಜೆಯ

ವರೆಗೆ ಹಾಗೆಯೇ ಆಗಿಯುತ್ತಲೇ ಇದ್ದನು. ಇತ್ತ ಆಚಾರ್ಯರು ಮುಂದೆ ಹೋದರು. ಸಾಯಂಕಾಲಕ್ಕೆ ಈಶ್ವರದೇವನಿಗೆ ಸ್ಮೃತಿ ಬಂದಿದೆ. ತಾನು ಯತಿದ್ರೋಹ ಮಾಡಿದೆನೆಂದು ಬಹು ಪರಿ ಪಶ್ಚಾತ್ತಾಪ ಪಟ್ಟನು

ಆಚಾರ್ಯರು ಸಂಚಾರ ಮಾಡುತ್ತ ಜಾನ್ಹವಿಯ ತೀರಕ್ಕೆ ಬಂದರು. ನದಿಯನ್ನು ದಾಟುವದು ಹೇಗೆಂದು ಶಿಷ್ಯರಿಗೆ ಚಿಂತೆಯುಂಟಾಯಿತು. ಅಲ್ಲಿಯ ಅರಸನು ಶತ್ರುಗಳು ಬರಬಹುದೆಂಬ ಭಯದಿಂದ ನಾವು ಹಾಕಲು ಪ್ರತಿಬಂಧ ಮಾಡಿ ಒಳದಂಡೆಗೆ ಸೈನ್ಯವನ್ನು ಇಟ್ಟಿದ್ದನು. ಇದನ್ನೆಲ್ಲ ಸರ್ವಜ್ಞರು ನೋಡಿದರು. ಕೂಡಲೆ ಶಿಷ್ಯರಿಗೆ ಒಬ್ಬರೊಬ್ಬರ ಕೈ ಹಿಡಿಯಲು ಹೇಳಿ ಮುಂದಿನವನ ಕೈಯ್ಯನ್ನು ತಾವು ಹಿಡಿದು ನದಿಯನ್ನು ದಾಟಹತ್ತಿದರು. ಮಧ್ಯಪ್ರವಾಹಕ್ಕೆ ಈ ಗುರುಶಿಷ್ಯಮಾಲಿಕೆಯು ಬಂದಿದೆ. ದಂಡೆಯ ಮೇಲಿದ್ದ ಸೈನ್ಯವು ಗಡಬಡಿಯಿಂದ ನೀರಲ್ಲಿಳಿದು "ಹೊಡೆಯಿರಿ, ಬಡಿಯಿರಿ; ಕಡಿಯಿರಿ" ಎಂದು ಕೂಗಿಕೊಳ್ಳುತ್ತಿದೆ. ಆಚಾರ್ಯರು ಶಿಷ್ಯಮಾಲಿಕೆಯೊಂದಿಗೆ ಮುಂದೆ ಮುಂದೆ ಬಂದರು. ಈ ಸೈನ್ಯದ ಭಯವು ಅವರಿಗೆ ಸ್ವಲ್ಪವೂ ಇರಲಿಲ್ಲ ಸೇನಾಪತಿಗೆ ಹೇಳಿದರು "ಏಕೆ ಕೂಗಿಕೊಳ್ಳುವೆ? ನಾವು ನಿಮ್ಮ ಅರಸನ ಹತ್ತರವೇ ಬರುವೆವು" ಎಂದು. ಹಾಗೆಯೇ ಅರಸನನ್ನು ಕಾಣುವದಕ್ಕೆ ಹೊರಟರು. ಸೈನಿಕರು ಬೆನ್ನುಹತ್ತಿದರು. ಅವರು ತಮ್ಮೊಳಗೆ ಯೋಚಿಸುತ್ತಿರುವರು "ಈ ಹಾರುವ ಸನ್ಯಾಸಿಯನ್ನು ನಾನೇ ಶೂಲಕ್ಕೇರಿಸಿ ಅರಸನ ಪ್ರೀತಿಗೆ ಪಾತ್ರನಾಗುವನೆ"ಂದು ಪ್ರತಿಯೊಬ್ಬನೂ ಹವಣಿಕೆ ಹಾಕುತ್ತಿರುವನು. ಅರಸನು ಮೇಲ್ಮಾಳಿಗೆಯ ಮೇಲೆ ನಿಂತು ಇದನ್ನೆಲ್ಲ ನೋಡಿದನು. ಅವನು ಜಾತಿವಂತ ಮುಸಲ್ಮಾನನು. ಆದರೂ ಆಚಾರ್ಯರ ಸ್ಥೈರ್ಯ ಧೈರ್ಯಗಾಂಭೀರ್ಯಗಳನ್ನು ನೋಡಿ ಬೆರಗಾದನು. "ನೀವು ನದಿಯನ್ನು ಹೇಗೆ ದಾಟಿದಿರಿ?" ಎಂದು ಮೇಲಿನಿಂದಲೇ ಆಚಾರ್ಯರಿಗೆ ಪ್ರಶ್ನೆ ಮಾಡಿದನು. "ಯಮದೂತ ಸಮರಾದ ನನ್ನ ಸೇವಕರು ನಿಮ್ಮನ್ನು ಹೊಡೆಯದೆ ಬಿಟ್ಟದ್ದು ಹೇಗೆ? ನೀವು ಮುಂದೇನು ಮಾಡಬೇಕೆನ್ನುವಿರಿ"

ಎಂದು ಮೊದಲಾಗಿಯೂ ಕೇಳಿದನು. ಆ ಯವನರಾಜನು ತನ್ನ ಅರಬ್ಬೀ ಭಾಷೆಯಲ್ಲಿ ಕೇಳಿದ ಪ್ರಶ್ನೆಗಳಿಗೆಲ್ಲ ಆಚಾರ್ಯರೂ ಅದೇ ಭಾಷೆಯಲ್ಲಿ ಉತ್ತರಕೊಟ್ಟರು. "ನಾವು ಹೇಗೆ ಬಂದೆವೊ ನಿಮ್ಮ ದಂಡಾಳುಗಳು ನಮ್ಮನ್ನು ಹೇಗೆ ಹೊಡೆಯಲಿಲ್ಲವೊ ನಮಗೇನು ಗೊತ್ತು? ಎಲ್ಲರ ಹೃದಯದಲ್ಲಿರುವ ಆ ದೇವನೇ ಅದನ್ನೆಲ್ಲ ಬಲ್ಲನು. ಈಗ ಅವನ ಆಜ್ಞೆಯಾಗಿದೆ. ಅದಕ್ಕನುಸಾರವಾಗಿ ನಾವು ಉತ್ತರ ದಿಕ್ಕಿಗೆ ಹೊರಟಿರುವೆವು. ಮುಂದೆ ನಾವೇನು ಮಾಡಬೇಕಾದುದೂ ಆ ಜಗಜ್ಜ್ಯೋತಿಗೇ ಗೊತ್ತು. ನಾವೇನು? ಪರಾಧೀನರು'' ಎಂದು ಹೇಳಿದರು. ಇದನ್ನು ಕೇಳಿ ಆ ಯವನರಾಜನಲ್ಲಿ ಭಕ್ತಿಯು ಅಂಕುರಿಸಿತು ಕೂಡಲೆ ಕೆಳಗಿಳಿದು ಬಂದು ಆಚಾರ್ಯರಿಗೆ ವಂದಿಸಿ ತನ್ನ ಅರ್ಧ ರಾಜ್ಯವನ್ನು ಅವರಿಗೆ ಕೊಟ್ಟೆನೆಂದು ಸಾರಿದನು. ಇದನ್ನು ನೋಡಿ ಸೇವಕರೂ ದಂಡಾಳುಗಳೂ ದಿಙ್ಮೂಢರಾದರು. ಕೊನೆಗೆ ಆಚಾರ್ಯರು ''ನನ್ನ ಪರವಾಗಿ ನೀನೇ ರಾಜ್ಯವನ್ನಾಳು'' ಎಂದು ಆ ಮ್ಲೇಂಛಭೂಪನಿಗೆ ಹೇಳಿ ಮುಂದೆ ಸಾಗಿದರು

ಹಿಮಾಲಯ ಪರ್ವತದಲ್ಲಿ ಹೋಗುವಾಗ್ಗೆ ಕಳ್ಳರ ಕೂಟವೊಂದು ಆಚಾರ್ಯರನ್ನೂ ಶಿಷ್ಯರನ್ನೂ ತರುಬಿತು. ಹಣವನ್ನಪಹರಿಸಬೇಕೆಂಬುದೇ ಅವರ ಉದ್ದೇಶವು. ಕೂಡಲೆ ಆಚಾರ್ಯರು ತಮ್ಮ ಶಾಟಿಯ ಚಂಡನ್ನು ಮಾಡಿ ಕಳ್ಳರಿಗೆ ತೋರಿಸಿ « ಇದೋ ನಮ್ಮ ದ್ರವ್ಯನಿಧಿ. ನಿಮ್ಮಲ್ಲಿ ಹಿರಿಯರಾರು ಹೇಳಿರಿ. ಅವರ ಕೈಯಲ್ಲಿ ಕೊಡುತ್ತೇವೆ. ನಮ್ಮನ್ನು ಕಾಡಬೇಡಿರಿ'' ಎಂದು ಹೇಳಿದರು. ಧನಲುಬ್ಧರಾದ ಕಳ್ಳರು ನಾನು ಹಿರಿಯ; ನನ್ನ ಕೈಯಲ್ಲಿ ಬೇಕು; ನನ್ನ ಕೈಯಲ್ಲಿ ಬೇಕೆಂದು ಪರಸ್ಪರ ತಮ್ಮೊಳಗೇ ಕಾದಾಡಿದರು. ಆಚಾರ್ಯರು ಮುಂದೆ ಸಾಗಿದರು. ಮತ್ತೊಂದು ಕಡೆಗೆ ಮೈ ಮೇಲೇರಿ ಬಂದ ಕಳ್ಳರ ಕೈಯೊಳಗಿನ ಕೊಡಲಿಗಳನ್ನು ಉಪೇಂದ್ರತೀರ್ಥರೆಂಬ ಶಿಷ್ಯರೊಬ್ಬರು ಕಸಿದುಕೊಂಡು ಅವರನ್ನೇ ಜಡಿದರು. ಒಂದು ರಾತ್ರಿಯಲ್ಲಿ ಆಚಾರ್ಯರು ಪ್ರವಾಸ ಮಾಡುತ್ತಿರುವರು. ಬೆಳ್ಳಿಯಂತಹ ಬೆಳದಿಂಗಳು ಬಿದ್ದಿದೆ. ಶಿಷ್ಯರೂ ಆಚಾರ್ಯರೂ ಚರ್ಚೆ ಮಾಡುತ್ತ

ಹೊರಟಿದ್ದಾರೆ. ಅಷ್ಟರಲ್ಲಿ ಕಳ್ಳರ ಸುಳಿವು ಆಚಾರ್ಯರಿಗೆ ಹತ್ತಿತು. ಕೂಡಲೆ ಇವರೆಲ್ಲರೂ ಕಲ್ಲಿನಂತೆ ಬದಿಯಲ್ಲಿ ಕುಳಿತರು. ಕಳ್ಳರು ಬಂದು ನೋಡಿದರು. ಯಾರೂ ದೊರೆಯಲಿಲ್ಲವೆಂದು ನಿರಾಶರಾಗಿ ಹೊರಟು ಹೋದರು. ಹಾಗೆಯೇ ಮುಂದೆ ಸಾಗುವ ಕಾಲಕ್ಕೆ ಸತ್ಯತೀರ್ಥರು ಮುಂದೆ ನಡೆಯುತ್ತಿದ್ದರು. ಅಷ್ಟರಲ್ಲಿ ಕ್ರೂರ ಹುಲಿಯೊಂದು ಸತ್ಯತೀರ್ಥರ ಮೇಲೆ ಜಿಗಿಯಿತು ಕೂಡಲೆ ಆಚಾರ್ಯರು ಅದರ ಮೇಲೆ ಹಾರಿ ಅದನ್ನು ನಾಶಮಾಡಿದರು.

ಹೀಗೆ ಅನೇಕ ಬಗೆಯ ಯುಕ್ತಿಶಕ್ತಿಯುಕ್ತವಾದ ಚಿತ್ರಲೀಲೆಗಳನ್ನು ಮಾಡುತ್ತ ಆಚಾರ್ಯರು ಶ್ರೀ ಬದರಿಕಾಕ್ಷೇತ್ರಕ್ಕೆ ಬಂದು ಅಲ್ಲಿ ಶ್ರೀಮನ್ನಾರಾಯಣನ ಸೇವೆ ಮಾಡುತ್ತ ಕೆಲವು ದಿನ ಇದ್ದರು. ಆಚಾರ್ಯರಿಗೆ ಶ್ರೀ ವೇದವ್ಯಾಸರನ್ನು ನೋಡುವ ಮನೀಷೆಯಾಗಿದೆ- ಕೂಡಲೆ ಶಿಷ್ಯರನ್ನು ಅಲ್ಲಿಯೇ ಇಟ್ಟು ತಾವು ಶ್ರೀ ವ್ಯಾಸಾಶ್ರಮಕ್ಕೆ ಹೋಗಿ ಅಲ್ಲಿ ಶ್ರೀ ವೇದವ್ಯಾಸರನ್ನು ಕಂಡು ಧನ್ಯರಾದರು. ಶ್ರೀ ಬಾದರಾಯಣರು ಆಚಾರ್ಯರಿಗೆ ಶ್ರೀ ಮಹಾಭಾರತ ತಾತ್ಪರ್ಯ ನಿರ್ಣಯವನ್ನು ಬರೆಯಲು ಅಪ್ಪಣೆ ಕೊಡಲು ಶ್ರೀಮದಾಚಾರ್ಯರು ಆ ಆಜ್ಞೆಯನ್ನು ಶಿರಸಾವಹಿಸಿದರು. ಹಾಗೆಯೇ ಶ್ರೀ ಬಾದರಾಯಣರು ಎಂಟು ವ್ಯಾಸಪ್ರತಿಮೆಗಳನ್ನು ಪ್ರತಿ ದಿನದ ಪೂಜೆಗಾಗಿ ಆಚಾರ್ಯರಿಗೆ ಕೊಟ್ಟರು. ಅವುಗಳನ್ನು ಭಕ್ತಿಪೂರ್ವಕ ಸ್ವೀಕರಿಸಿ ತಮ್ಮ ಶಿಷ್ಯರಿದ್ದ ಮಠಕ್ಕೆ ಆಚಾರ್ಯರು ಬಂದರು. ಅವರು ಮರಳಿ ಬಂದದ್ದನ್ನು ಕಂಡು ಶಿಷ್ಯರಿಗಾದ ಸಂತೋಷವನ್ನು ವರ್ಣಿಸಲು ಶಕ್ಯವೆ? ಅಲ್ಲಿ ಮತ್ತೆ ಕೆಲವು ಕಾಲ ಇದ್ದು ಶ್ರೀ ವ್ಯಾಸಾಜ್ಞೆಗೆ ಅನುಸಾರವಾಗಿ ಶ್ರೀಮಹಾಭಾರತ ತಾತ್ಪರ್ಯ ನಿರ್ಣಯವನ್ನು ಬರೆದು ಶ್ರೀಮನ್ನಾರಾಯಣನಿಗೆ ಸಮರ್ಪಿಸಿ ಶಿಷ್ಯಸಮೇತರಾಗಿ ಅಲ್ಲಿಂದ ಹೊರಟು ಹಿಮಾಲಯವನ್ನಿಳಿದು ಶ್ರೀಮದಾಚಾರ್ಯರು ಗಂಗಾತೀರಕ್ಕೆ ಬಂದಿರುವರು. ಶಿಷ್ಯರಿಗೆಲ್ಲ ಅಪಾರವಾದ ನದಿಯನ್ನು ದಾಟುವ ಬಗೆ ಹೇಗೆ ಎಂದು ಘನವಾದ ಚಿಂತೆ. ಸೂರ್ಯನೂ ಅಸ್ತಾಚಲವನ್ನೈದಲಿದ್ದನು. ಇದಕ್ಕಾಗಿ ಎಲ್ಲರೂ ವಿಷಣ್ಣರಾಗಿರುವರು. ಇವರೆಲ್ಲರನ್ನು ನೋಡಿ ನೋಡಿ ಆಚಾ

ರ್ಯರು ತಾವು ಮಾತ್ರ ನದಿಯನ್ನು ಅನಾಯಾಸವಾಗಿ ದಾಟಿ ಹೋದರು. ಇದರಿಂದಂತೂ ಶಿಷ್ಯರು ತಮ್ಮ ಗತಿಯಿನ್ನೇನೆಂದು ಗಡಬಡಿಸಿದರು. ನದಿಯ ಆಚೆ ದಂಡೆಯಲ್ಲಿದ್ದ ಬ್ರಾಹ್ಮಣರೂ ಅರಸನೂ ಇದನ್ನು ನೋಡಿದರು. ನೆಲದ ಮೇಲೆ ನಡೆವಂತೆ ಆಚಾರ್ಯರು ನೀರಮೇಲೆ ಬಂದುದನ್ನೂ ಅವರ ಅರಿವೆಗಳು ಸ್ವಲ್ಪವೂ ತೋಯದಿರುವದನ್ನೂ ಕಂಡು ಬೆರಗಾದರು. ಕೂಡಲೆ ಆಚಾರ್ಯರಿಗೆ ಭಯಭಕ್ತಿಗಳಿಂದ ವಂದಿಸಿ ನೌಕೆಯನ್ನು ಕಳಿಸಿ ಶಿಷ್ಯರನ್ನೂ ಕರಿಸಿಕೊಂಡರು. ಅಲ್ಲಿಯೇ ಸಭೆ ಕೂಡಿತು. ಗಂಗಾತೀರ ವಿಶಾಲವಾದ ಉಸುಬಿನ ಬೈಲು. ಸಂಧ್ಯಾಕಾಲ. ಸಾವಿರಾರು ದೀಪಗಳನ್ನು ಹಚ್ಚಿರುವರು. ಮಧ್ಯದಲ್ಲಿ ಉಚ್ಚಾಸನದ ಮೇಲೆ ಕುಳಿತು ಆಚಾರ್ಯರು ತತ್ವೋಪದೇಶವನ್ನು ಮಾಡುತ್ತಿರುವರು. ಭಗವನ್ನಾರಾಯಣನು ಸಚ್ಚಿದಾನಂದಾದಿ ಗುಣಗಣಪರಿಪೂರ್ಣನು. ಅವನೇ ಸರ್ವೋತ್ತಮನು. ಈ ಜಗತ್ತು ಸತ್ಯವಿದೆ. ನಿಜವಾಗಿಯೇ ಪರಸ್ಪರರಲ್ಲಿ ಭೇದವಿದೆ. ಜೀವ ಜೀವ ಭೇದ, ಜೀವ ಜಡ ಭೇದ, ಜಡ ಜಡ ಭೇದ, ಜೀವೇಶ ಭೇದ, ಜಡೇಶ ಭೇದ ಈ ಐದು ಭೇದಗಳೂ ನಿಜವಾದವು. (ವ್ಯಾವಹಾರಿಕ. ಮಾತ್ರವಲ್ಲ) ಎಲ್ಲರೂ ಆ ಅನಂತಗುಣಪರಿಪೂರ್ಣ ಪರಮಾತ್ಮನ ದಾಸರು. ಮುಕ್ತಿಯೆಂದರೆ ಪರಮಾತ್ಮನಲ್ಲಿ ಐಕ್ಯವಲ್ಲ ಆದರೆ ನಿಜಾನಂದಾನುಭವವು" ಎಂಬಿವೇ ಮೊದಲಾದ ಸತ್ಯಸಿದ್ಧಾಂತಗಳನ್ನೇ ಆಚಾರ್ಯರು ವೇದ ಉಪನಿಷತ್ತು ಸೂತ್ರ ಸ್ಮೃತಿ ಪುರಾಣ ಮೊದಲಾದ ಪ್ರಮಾಣಗಳನ್ನು ಹೇಳುತ್ತಾ ಪ್ರತಿಪಾದಿಸುತ್ತಿರುವರು ಈ ಸಭೆಯ ಸೊಬಗನ್ನು ನೋಡಲೂ ಆಚಾರ್ಯರ ಉಪದೇಶವನ್ನು ಕೇಳಲೂ ದೇವತೆಗಳೆಲ್ಲ ಆಕಾಶದಲ್ಲಿ ಬಂದಿರುವರು. ಆದಿಶೇಷನು ಕೂಡ ಉಪದೇಶವನ್ನು ಕೇಳುವದಕ್ಕೆಂದು ಸನಕಾದಿ ಮುನಿಗಳಿಂದ ಕೂಡಿಕೊಂಡು ಬಂದಿರುವನು. ಆಚಾರ್ಯರ ವ್ಯಾಖ್ಯಾನವು ಮುಗಿಯುತ್ತ ಬಂದಿದೆ. ಅವರು ಮೇಲೆ ನೋಡಿ ಮಂದಹಾಸ ಮಾಡಿದರು. ಗೋಣು ಅಲ್ಲಾಡಿಸಿದರು. ಕೂಡಲೆ ದೇವತೆಗಳು ಹೊರಟರು. ಆದಿಶೇಷನು ಹೊರಡುವ ಕಾಲಕ್ಕೆ ಆಚಾರ್ಯರ ಅನುಮತಿಯಂತೆ

ಪ್ರಕಾಶಮಾನನಾದನು. ಕೂಡಲೆ ಮುಗಿಲಲ್ಲಿ ಕೋಲ್ಮಿಂಚು ಮಿಂಚಿತು. ಸಭೆಯಲ್ಲ ಮೇಲ್ಕೋರೆ ಮಾಡಿತು. ಅವರೆಲ್ಲರ ಕಣ್ಣು ಕುಕ್ಕಿದವು. ಮೋಡವಿಲ್ಲದ ಮುಗಿಲಲ್ಲಿ ಇದೇನೆಂದು ಕೇಳಿದರು. ಆಚಾರ್ಯರು ನಡೆದ ಸುದ್ದಿಯನ್ನೆಲ್ಲ ಹೇಳಿದರು.

ಚಾತುರ್ಮಾಸ್ಯವು ಬಂದಿದೆ. ಸರ್ವಜ್ಞಾಚಾರ್ಯರು ಹಸ್ತಿನಾವತಿಗೆ ಬಂದು ಅಲ್ಲಿಯೇ ಇರುವದನ್ನು ಗೊತ್ತುಪಡಿಸಿ ಊರ ಹೊರಗಿನ ಮಠದಲ್ಲಿ ಉಳಿದುಕೊಂಡರು. ಒಂದು ದಿನ ಆಚಾರ್ಯರು ಪಾಠ ಹೇಳುತ್ತಾ ಕುಳಿತಿರುವರು. ಮಠದ ಎದುರಿನ ಗಿಡದಿಂದ ನೀರಿನ ಪ್ರವಾಹವು ಪ್ರಾರಂಭವಾಯಿತು. ಭಾಗೀರಥಿಯು ಪ್ರತ್ಯಕ್ಷಳಾದಳು. ಶಿಷ್ಯರೆಲ್ಲ ಅಚ್ಚರಿಗೊಂಡು ಅದನ್ನೇ ನೋಡುತ್ತಿರುವರು. ಅಷ್ಟರಲ್ಲಿ ಸೌಂದರ್ಯವತಿಯಾದ ತರುಣಿಯ ರೂಪದಿಂದ ಮೂರ್ತಿಮಂತ ಭಾಗೀರಥಿಯು ಕಂಡಳು. ಆಚಾರ್ಯರ ಹತ್ತರ ಬಂದು ಭಕ್ತಿಯಿಂದ ವಂದಿಸಿದಳು.

ಚಾತುರ್ಮಾಸ್ಯವು ಮುಗಿದಿದೆ. ಪೂರ್ಣಬೋಧರು ಅಲ್ಲಿಂದ ಹೊರಟು ಶ್ರೀಕಾಶೀಕ್ಷೇತ್ರಕ್ಕೆ ಬಂದಿರುವರು. ಶಿಷ್ಯವರ್ಗದಲ್ಲಿ ತಾವು ಮಹಾಬಲಶಾಲಿಗಳೆಂಬ ಗರ್ವವು ಕೊಂಚ ತಲೆದೋರುತ್ತದೆ. ಶಿಷ್ಯರಲ್ಲಿ ಹುಟ್ಟಿದ ಈ ಅಹಂಕಾರವು ಆಚಾರ್ಯರಿಗೆ ಸಹನವಾಗಲಿಲ್ಲ. ಶಿಷ್ಯರನ್ನೆಲ್ಲರನ್ನು ಕರಿಸಿ ನೀವೆಲ್ಲರೂ ಕೂಡಿ ನನ್ನ ಸಂಗಡ ಕುಸ್ತಿಯನ್ನು ಹಿಡಿಯಿರಿ. ಎಂದು ಹೇಳಿದರು ಶಿಷ್ಯರಿಗೆ ಅದು ನಿಜವೆನಿಸಲಿಲ್ಲ. ಆಚಾರ್ಯರು ಮತ್ತೆ ಮತ್ತೆ ಹೇಳಿದ್ದರಿಂದ ಶಿಷ್ಯರೆಲ್ಲರೂ ಕೂಡಿ ಒಮ್ಮೆಲೇ ಅವರ ಮೇಲೇರಿ ಹೋದರು. ಆಚಾರ್ಯರು ಏರಿ ಬಂದ ಎಲ್ಲರನ್ನೂ ಕೆಳಗೆ ಕೆಡವಿ ತಾವು ಮೇಲೆ ಕುಳಿತರು. ಶಿಷ್ಯರಿಗೆ ಇವರ ಭಾರ ಹೊರುವದು ಅಸಾಧ್ಯವಾಯಿತು. ಮನದಲ್ಲಿಯ ಗರ್ವವೂ ಹೊರಟು ಹೋಯಿತು. ಕೈಮುಗಿದು ಬೇಡಿಕೊಂಡರು. ಆಚಾರ್ಯರೂ ನಗುತ್ತ ಎದ್ದರು.

ಶ್ರೀಕಾಶೀಕ್ಷೇತ್ರದಲ್ಲಿ ಇಂದ್ರಪುರಿ (ಅಮರಾವತೀ) ಎಂಬ ಹೆಸರಿನ ಪಂಡಿತನೋರ್ವನು ಎಲ್ಲ ವಾದಿಗಳನ್ನು ಗೆದ್ದು ಪ್ರಖ್ಯಾತನಾಗಿದ್ದನು. ಆವನೂ ಸರ್ವಜ್ಞಾಚಾರ್ಯರೊಂದಿಗೆ ವಾದಮಾಡಿ ಪರಾಜಯ ಹೊಂದಿದನು.

ಅಲ್ಲಿಂದ ಮುಂದೆ ಪ್ರವಾಸ ಮಾಡುತ್ತ ಮಾಡುತ್ತ ಆಚಾರ್ಯರು ಶಿಷ್ಯಸಮೇತರಾಗಿ ಕುರುಕ್ಷೇತ್ರಕ್ಕೆ ಬಂದರು. ಕೂಡಲೆ ಪೂರ್ವಾವತಾರದಲ್ಲಿ ತಾವು ಅಲ್ಲಿ ಮಾಡಿದ ಯುದ್ಧ ಮೊದಲಾದುದರ ಸ್ಮರಣವು ಅವರಿಗೆ ಬಾರದಿರಲಿಲ್ಲ. ಅಲ್ಲಿ ನಡೆದ ಅನೇಕ ಗುಪ್ತ ವಿಷಯಗಳನ್ನು ಶಿಷ್ಯರಿಗೆ ಅವರು ಹೇಳಿದರು. ಆದರಿಂದ ಶಿಷ್ಯರಿಗೂ ಇವರು ಪೂರ್ವದಲ್ಲಿ ಭೀಮಸೇನರಿದ್ದರೆಂಬುದು ನೆನಪಿಗೆ ಬಂತು. ಆ ಕಾಲದ ಗದೆಯನ್ನು ಶಿಷ್ಯರಿಗೆ ತೋರಿಸಿದರು. ಅಲ್ಲಿಂದ "ಕಾಳಾಹೃಷೀಕೇಶ" ದೇಶಕ್ಕೆ ಆಚಾರ್ಯರು ಬಂದರು. ಅಲ್ಲಿ ಶೈವ ಆರಸನೊಬ್ಬನು ಆಚಾರ್ಯರ ಶಿಷ್ಯತ್ವವನ್ನು ವಹಿಸಿದನು. ಅಲ್ಲಿ ಸಭೆ ನಡೆದ ಕಾಲಕ್ಕೆ ಯಾರಿಗೂ ಕಾಣದಂತೆ ಗುಪ್ತರಾಗಿ ಸ್ವಲ್ಪಾವಕಾಶದಲ್ಲಿ ಮತ್ತೆ ಕಾಣಿಸಿಕೊಂಡರು. ಇದರಿಂದ ಎಲ್ಲರಿಗೂ ಅತ್ಯಂತ ಸೋಜಿಗವಾಗಿದೆ. ಅಷ್ಟರಲ್ಲಿ ಭೋಜನಕಾಲವಾಗಿದೆ. ಅಡಿಗೆಯಿಲ್ಲ. ಮುಂದೇನು ಮಾಡುವದೆಂಬ ವಿಚಾರದಲ್ಲಿ ಎಲ್ಲರೂ ತೊಡಗಿರುವರು. ಅಷ್ಟರಲ್ಲಿ ಆಚಾರ್ಯರು "ಈಗ ಇಲ್ಲಿಗೆ ಊಟವು ಬರುವದು. ಯಾರೂ ಚಿಂತಿಸುವ ಕಾರಣವಿಲ್ಲ" ಎಂದು ಹೇಳಿದರು. ಆದರಂತೆಯೇ ಬ್ರಾಹ್ಮಣ ಸಂಘವೊಂದು ಅಲ್ಲಿಗೆ ಬಂದಿತು. ಆಹಾರವನ್ನು ಮುಂದಿಟ್ಟು ಕೈಮುಗಿದು ನಿಂತುಕೊಂಡಿತು. ಅವರಲ್ಲಿಯ ಹಿರಿಯನೊಬ್ಬನು "ಸ್ವೀಕರಿಸಬೇಕು" ಎಂದು ವಿಜ್ಞಾಪಿಸಿದನು. ಎಲ್ಲರಿಗೂ ಸಂತೋಷವಾಗಿದೆ. ಸೋಜಿಗವೂ ಎನಿಸಿತು. "ಹೀಗೆ ಹೇಗಾಯಿತು?" ಎಂದು ಚಿಂತಿಸಿದರು. ಆಚಾರ್ಯರ ಪ್ರಭಾವವೇ ಎಂದು ಮನದಂದು ಅವರನ್ನು ಕೊಂಡಾಡಿದರು.

ಮುಂದೆ ಆಚಾರ್ಯರು ಅಲ್ಲಿಂದ ಗೋಮಾಂತಕ ಪ್ರಾಂತಕ್ಕೆ ಬಂದಿರುವರು. ಇವರ ಭಕ್ತರಾದ ಶ್ರೀ ಶಂಕರಭಟ್ಟರು ಇವರಿಗೆ

ಆತಿಥ್ಯವಮಾಡಿದರು. ಅಲ್ಲಿಯ ಅರಸನು ಇವರ ಪ್ರಭಾವವನ್ನು ನೋಡುವ ಅಭಿಲಾಷೆಯಿಂದ ಮೂವತ್ತೈದು ಕೊಡ ಹಾಲನ್ನೂ ದೊಡ್ಡ ದೊಡ್ಡ ಸಾವಿರಾರು ಬಾಳೆಹಣ್ಣುಗಳನ್ನೂ ತಂದು ಮುಂದಿಟ್ಟು ಸ್ವೀಕರಿಸಿರಿ ಎಂದು ಒತ್ತಾಯಪಡಿಸಿದರು. ಆಚಾರ್ಯರು ಅವನ್ನೆಲ್ಲ ತಿಂದು ಮೊದಲಿನಂತೆಯೇ ಪಾಠಪ್ರವಚನಗಳನ್ನು ನಿರಾಯಾಸವಾಗಿ ನಡಿಸಿದರು. ಅಲ್ಲಿಯ ಅರಸನು ಇವರ ಬಲವನ್ನು ನಿರೀಕ್ಷಿಸಿ ಇವರನ್ನು ಬಂಧನದಲ್ಲಿಡಲು ಹವಣಿಸಿದನು ಇವರಿಂದ ತಮ್ಮ ರಾಜ್ಯಕ್ಕೆ ಅಪಾಯವಾದೀತೆಂಬುದೇ ಅವನ ಭಯ. ಆದರೆ ಸರ್ವಜ್ಞಾಚಾರ್ಯರು ಇವನ ಮನೋಗತವನ್ನು ತಿಳಿದು ಅಲ್ಲಿಯೇ ಅದೃಶ್ಯರಾದರು. ಅರಸನು ಅವರನ್ನು ಎಲ್ಲಿ ಹುಡುಕಿಸಿದರೂ ಕಾಣಲಿಲ್ಲ; ಆದರೆ ಅದೇ ಕಾಲಕ್ಕೆ ಮತ್ತೊಂದು ಊರಲ್ಲಿ ಸಭೆ ನಡಿಸಿದ್ದರು. ಅಲ್ಲಿ ಭಕ್ತನೋರ್ವನ ಅಡಿಕೆ ತೋಟಕ್ಕೆ ಬಹುದಿನವಾದರೂ ಹೂವು ಕಾಯಿಗಳಾಗಿರಲಿಲ್ಲ. ಅವನು ಆಚಾರ್ಯರಿಗೆ ಬಿನ್ನವಿಸಿ ತನ್ನ ಮನೋಗತವನ್ನು ತಿಳಿಸಿದನು. ಆಚಾರ್ಯರು ಸಂಗೀತ ಕಲಾನಿಪುಣರಂತೆ ಗಾಯನಕ್ಕೆ ಮೊದಲುಮಾಡಿ ಮೋಹನ ರಾಗವನ್ನು ಪ್ರಾರಂಭಿಸಿದರು. ಕೂಡಲೆ ಜನತೆಯನ್ನು ನಿದ್ರೆಯು ಆವರಿಸಿತು. ಜನವು ಎಚ್ಚರಾಗಿ ಕಣ್ದೆರೆದು ನೋಡುವಷ್ಟರಲ್ಲಿ ಗಿಡಗಳೆಲ್ಲ ಫಲಭರಿತವಾಗಿದ್ದವು. ಹೀಗೆ ಭುವನಮೋಹಕವಾದ ಅನೇಕ ಬಗೆಯ ಲೀಲೆಗಳನ್ನು ಮಾಡುತ್ತ ಶ್ರೀಮದಾಚಾರ್ಯರು ಉಡುಪಿಗೆ ಬಂದು ಶ್ರೀಮದನಂತೇಶ್ವರನಿಗೂ ಗುರುಗಳಿಗೂ ಅಭಿವಂದಿಸಿದರು

ಅಲ್ಲಿ ಗುರುಗಳ ಸನ್ನಿಧಾನದಲ್ಲಿ ಕೆಲವು ದಿನ ವಾಸಮಾಡಿ ಆಚಾರ್ಯರು ಚೋಳ ಮೊದಲಾದ ದೇಶಗಳಿಗೆ ಹೋಗಿ ವಾದಿಪರಾಜಯವನ್ನು ಮಾಡಿ ಬಂದರು ಹೀಗೆ ಸರ್ವಜ್ಞಾಚಾರ್ಯರು ಆಸೇತು ಹಿಮಾಚಲಭಾಗವನ್ನು ಪ್ರವಾಸದಿಂದ ಪವಿತ್ರಮಾಡಿ ವಾದಿಗಳನ್ನು ಗೆದ್ದು ದ್ವೈತಸಿದ್ಧಾಂತವನ್ನು ಸ್ಥಾಪಿಸಿದರು. ಇದು ಮಾಯಾವಾದಿಗಳಿಗೆ ಸಹನವಾಗುವದೆಂತು? ಹೊಟ್ಟೆಯಲ್ಲಿಯ ಕಿಚ್ಚು, ಅದರಿಂದಾದ ರೊಚ್ಚು ಹೆಚ್ಚಾದವು. ಆದರೆ ಆನಂದತೀರ್ಥರನ್ನು ಗೆಲ್ಲುವ

ವಿದ್ವತ್ತೆಯೂ ಧೈರ್ಯವೂ ಯಾರಲ್ಲಿಯೂ ಇರಲಿಲ್ಲ. ಆದರೂ ಎಲ್ಲರೂ ಒತ್ತಟ್ಟಿಗೆ ಕೂಡಿರುವರು. ಸಭೆಯಲ್ಲಿ ತಮ್ಮ ತಮ್ಮ ಹೃದಯಸ್ಥ ವೇದನೆಗಳನ್ನು ಹೇಳಿದರು. ಆ ಕಾಲಕ್ಕೆ ಪದ್ಮತೀರ್ಥ, ಪುಂಡರೀಕಪುರಿಗಳೆಂಬವರಿಬ್ಬರು ಅದ್ವೈತಸಿದ್ಧಾಂತದಲ್ಲಿ ಪ್ರವೀಣರು. ಅವರು ಆನಂದತೀರ್ಥರನ್ನು ಸೋಲಿಸುವೆವೆಂಬ ಪ್ರತಿಜ್ಞೆ ಮಾಡಿದರು. ಅವರ ಪುಸ್ತಕಗಳನ್ನು ಕಸಿದುಕೊಳ್ಳುವದು, ದಂಡವನ್ನು ಮುರಿಯುವದು, ಸಭೆಯಲ್ಲಿ ಗೊಂದಲ ಹಾಕುವದು ಮೊದಲಾದ ಕ್ರಿಯೆಗಳಿಂದ ಶ್ರೀಮದಾಚಾರ್ಯರ ಅವಮಾನಗೊಳಿಸಿರೆಂದು ತಮ್ಮ ಅನುಚರರಿಗೆ ಹೇಳಿದರು. ಕೂಡಲೆ ಶಿಷ್ಯ ಮಂಡಲಿಯನ್ನೊಡಗೊಂಡು ಪುಂಡರೀಕಪುರಿಯು ಉಡುಪಿಗೆ ಬಂದನು. ಶ್ರೀಮದಾಚಾರ್ಯರನ್ನು ಕಂಡು ವಾದಪ್ರಸ್ತಾಪ ಮಾಡಿದನು. ತೀಕ್ಷ್ಣ ಬುದ್ಧಿಯಿಂದ ಅವರನ್ನು ಗೆಲ್ಲಲು ಯತ್ನಿಸಿದನು. ಆದರೆ ಈ ಪ್ರಯತ್ನವೆಲ್ಲ ಹೊಳೆಯಲ್ಲಿ ಹುಣಿಸಿ ಹಣ್ಣು ತೊಳೆದಂತೆ, ಸಮುದ್ರ ತೆರೆಯಲ್ಲಿ ಮಳಲಮನೆ ಕಟ್ಟಿದಂತೆ ಆಯಿತು.

## ರಾಜಸನ್ಮಾನ

ಶ್ರೀಮದಾಚಾರ್ಯರು ವೇದೋಪನಿಷತ್ತುಗಳಿಗೆ ಭಾಷ್ಯ ಬರೆದು ವೇದಗಳನ್ನೂ ಅವುಗಳ ಅರ್ಥವನ್ನೂ ಹೇಳುತ್ತಿರುವರು. ಎಲ್ಲ ಕಡೆಗೂ ಇವರ ಪಾಂಡಿತ್ಯವು ಗಾಳಿಯಂಗೂಡ ಹಬ್ಬಹತ್ತಿದೆ. ವೇದಕ್ಕೆ ವ್ಯಾಖ್ಯಾನ ನಡೆದ ಕಾಲಕ್ಕೆ ಇವರು ಪ್ರಸಂಗಾನುಸಾರವಾಗಿ ಉದಹರಿಸುವ ವ್ಯಾಕರಣ, ನಿರುಕ್ತ, ಛಂದಃಶಾಸ್ತ್ರದ ವಿಷಯಗಳಲ್ಲಿಯ ಇವರ ಪ್ರಾವೀಣ್ಯವನ್ನು ಕಂಡು ಅನೇಕ ಮಾಯಾಶಾಸ್ತ್ರ ಪಂಡಿತರು ಕೂಡ ಬೊಟ್ಟು ಕಚ್ಚುತ್ತಿದ್ದರು. ಇದು ಪುಂಡರೀಕಪುರಿಗೆ ಸಹನವಾಗದೆ ಹೋಯಿತು. ತಾನೂ ವೇದವ್ಯಾಖ್ಯಾನವನ್ನು ಪ್ರಾರಂಭಿಸಿದನು. ಆದರೆ "ಅಗ್ನಿನಾರಾಯಿಂ" ಸೂಕ್ತದ ಪದಚ್ಛೇದ ಮಾಡುವಾಗಲೇ ತಪ್ಪಿದ್ದರಿಂದ ಕೂಡಿದ ಜನರೆಲ್ಲರೂ ಖೊಳ್ಳನೇ ನಕ್ಕರು. ಪುಂಡರೀಕಪುರಿಗೆ ಇದರಿಂದ ಅಸಹ್ಯವಾದ ಅವಮಾನವಾಗಿದೆ. ಇವನ ಮಿತ್ರನಾದ ಪದ್ಮತೀರ್ಥನು ಆಚಾರ್ಯರೊಂದಿಗೆ ವಾದಿಸಿ ಪರಾಜಯ

ಹೊಂದಿದನು. ಹೊಟ್ಟೆಯಲ್ಲಿ ಉರಿಯುವ ಕಿಚ್ಚು ಹೋಗಲಿಲ್ಲ. ಆಚಾರ್ಯರನ್ನು ಅಪಮಾನಪಡಿಸುವದೇ ಅವನ ಮನೋಗತವಾಗಿದ್ದಿತು. ತಾವು ಬರೆದ ಭಾಷ್ಯಗಳೇ ಮೊದಲಾದ ಗ್ರಂಥಸಂಗ್ರಹವನ್ನು ತಮ್ಮ ಜೊತೆಗೆ ಇದ್ದ ಎತ್ತಿನ ಮೇಲೆ ಹೇರಿಕೊಂಡು ಶ್ರೀಮದಾಚಾರ್ಯರು ಜ್ಞಾನಪ್ರಸಾರ ಮಾಡುತ್ತ ನಡೆದಿದ್ದರು. ಅವರ ಹಿಂದಿನಿಂದಲೇ ಪದ್ಮಪುರಿಯೂ ಅವರಿಗೆ ಗೊತ್ತಾಗದಂತೆ ಹೊರಟಿದ್ದಾನೆ. ಆಚಾರ್ಯರು ಎತ್ತಿನ ಭಾರಕ್ಕೆ ಹೆಚ್ಚಾದ ಗ್ರಂಥಗಳನ್ನು ತಮ್ಮ ಶಿಷ್ಯರಾದ ಶಂಕರಭಟ್ಟರಲ್ಲಿಟ್ಟು ಮುಂದೆ ನಾಗಿದರು ಇದನ್ನು ಪದ್ಮಪುರಿಯು ಅರಿತು ಶಂಕರಭಟ್ಟರಲ್ಲಿಯ ಪುಸ್ತಕ ಸಂಗ್ರಹವನ್ನು ತೆಗೆದುಕೊಂಡು ಓಡಿ ಹೋದನು. ಈ ಕೃತಿಯು ಆಚಾರ್ಯರಿಗೂ, ಉಳಿದ ಜನರಿಗೂ ತಿಳಿಯಿತು. ಆಚಾರ್ಯರಿಗೆ ಇದರಿಂದ ಏನೂ ಹಾನಿಯೆನಿಸಲಿಲ್ಲ. ಆದರೆ ಪದ್ಮಪುರಿಯು ಕಳವು ಹೊರಬಿದ್ದು ಅವನೇ ಜನನಿಂದೆಗೆ ಪಾತ್ರನಾದನು. ಮಾಯಾವಾದ ಸಿದ್ಧಾಂತರಾದ್ಧಾಂತಿಯೆನಿಸಿದ ವಾದಿಸಿಂಹನೆಂದು ಹೆಸರು ಪಡೆದ ಪದ್ಮಪುರಿಯು ಹೀಗೆ ಮಾಡಿದ್ದರಿಂದ ಎಲ್ಲರಿಗೂ ವಿಷಾದವೆನಿಸಿದೆ. ಆಚಾರ್ಯರು ಮತ್ತೆ ಪದ್ಮಪುರಿಯು ಇದ್ದ ''ಕೌಲು" ಎಂಬ ಊರಿಗೆ ಹೋದರು. ಅವನನ್ನು ಜಯಿಸಿದರು. ಪುರಿಗೆ ಇದೆಲ್ಲ ಸಹನವಾಗದೆ ಅವನು ರಾತ್ರಿಯಲ್ಲಿ ಓಡಿ ಹೋದನು. ಅವನು ಎತ್ತಿ ಹಾಕಿದ ಪುಸ್ತಕಗಳೆಲ್ಲ ಇವರಿಗೆ ದೊರೆತವು. ಮುಂದೆ ಮುಂದೆ ಮಾಯಾವಾದಿಗಳೆಲ್ಲರೂ ಆಚಾರ್ಯರ ಗೋಜಿಗೆ ಹೋಗದೆ ದೂರದಲ್ಲಿಯೇ ಇರಹತ್ತಿದ್ದರು. ಕೆಲವರು ನಿರ್ಮತ್ಸರದಿಂದ ಆಚಾರ್ಯರ ಉಪದೇಶವನ್ನು ಕೇಳುತ್ತ ಆನಂದ ಪಡುತ್ತಿದ್ದರು.

ಆನಂದತೀರ್ಥರು ಹೀಗೆ ಚೋಳ ದೇಶದಲ್ಲಿಯ ಪಂಡಿತರನ್ನೆಲ್ಲ ಗೆದ್ದು ಅಲ್ಲಿಂದ ಪಶ್ಚಿಮ ದಿಶೆಗೆ ಹೊರಳಿದರು. ಸಹ್ಯಪರ್ವತಕ್ಕೆ ಬಂದು ಅಲ್ಲಿಯ ವಿಚಿತ್ರ ವನಶೋಭೆಯನ್ನು ನೋಡುತ್ತ ಅಲ್ಲಿಯೇ ಕೆಲವು ಕಾಲ ವಾಸಮಾಡಿದರು. ಅಲ್ಲಿಂದ ಉತ್ತರ ಸೀಮೆಯಲ್ಲಿ

ಕುಂಬಳೆ ಎಂಬ ಊರಲ್ಲಿ ಜಯಸಿಂಹನೆಂಬ ರಾಜನೊಬ್ಬನು ಪ್ರಖ್ಯಾತ ಧೈರ್ಯಶಾಲಿಯಾಗಿದ್ದನು. ಸುತ್ತುಮುತ್ತಿನ ಎಲ್ಲ ರಾಜರನ್ನು ತನ್ನ ಶೌರ್ಯದಿಂದ ಗೆದ್ದಿದ್ದ ಅವನ ಭಕ್ತಿಯು ಶ್ರೀಮದಾನಂದತೀರ್ಥ ರಲ್ಲಿ ನೆಲೆಗೊಂಡು ಇವರನ್ನು ತನ್ನ ರಾಜಧಾನಿಗೆ ಕರಿಸಿಕೊಳ್ಳುವ ಅಪೇಕ್ಷೆಯು ಅವನಲ್ಲಿ ಉಂಟಾಯಿತು. ಕೂಡಲೆ ದೂತರನ್ನು ಕಳಿಸಿ ತನ್ನ ಮನೋಗತವನ್ನು ಆಚಾರ್ಯರಿಗೆ ತಿಳಿಸಿದನು. ಅವನ ಭಕ್ತಿ ಯನ್ನು ಕೇಳಿ ಆಚಾರ್ಯರು ಅತ್ತ ಕಡೆಗೆ ಹೊರಟರು. ರಾಜಧಾನಿಗೆ ಸಮೀಪದಲ್ಲಿ ಸ್ತಂಭೋಪಸರ್ಜನ (ಮಧುರಾ) ವೆಂಬದೊಂದು ಗ್ರಾಮ ವಿರುವದು. ಅಲ್ಲಿರುವ ಮದನಾಧಿಪತಿಯ ದೇಗುಲದಲ್ಲಿ ಆಚಾರ್ಯರು ಉಳಿದುಕೊಂಡದ್ದನ್ನು ಅರಸನು ಕೇಳಿದನು- ಮರುದಿನ ಬೆಳಿಗ್ಗೆ ಚತುರಂಗ ಸೇನೆಯೊಡನೆ ಕುಂಬಳೆ ಎಂಬ ತನ್ನ ರಾಜಧಾನಿಯಿಂದ ಆಚಾರ್ಯರನ್ನು ಎದರುಗೊಳ್ಳಲು ಹೊರಟನು. ದೇವಾಲಯದೊಳಗೆ ಪ್ರಾತಃಕಾಲದ ಆನ್ಹಿಕದಲ್ಲಿ ತೊಡಗಿದಾಗ ಸರ್ವಜ್ಞಾಚಾರ್ಯರನ್ನು ಕಂಡು ಮನದಲ್ಲಿ ಧನ್ಯತೆಯನ್ನು ನೆನೆದು ವಂದಿಸಿದನು. ಆನ್ಹಿಕ ಮುಗಿದ ಬಳಿಕ ತನ್ನ ರಾಜಧಾನಿಗೆ ಬಿಜಯಂಗೈಯಲು ಬಿನ್ನವಿಸಿ ದನು ಆಚಾರ್ಯರು ಶಿಷ್ಯರೊಂದಿಗೆ ಸೇನಾಸಮೂಹದ ಮಧ್ಯದಲ್ಲಿ ಹೊರಟರು. ಇವರನ್ನು ನೋಡುವ ಅಪೇಕ್ಷೆಯು ಪ್ರತಿಯೊಬ್ಬನ ಲ್ಲಿಯೂ ಹೆಚ್ಚಾಯಿತು ಜನಸಂದಣಿಯಲ್ಲಿ ಆಚಾರ್ಯರು ಕಾಣದಾ ದರು. ಆಗ ಶಿಷ್ಯನೊಬ್ಬನು ತನ್ನ ಹೆಗಲ ಮೇಲೆ ಕೂಡಬೇಕೆಂದು ಬಿನ್ನವಿಸಲು ಸರ್ವಜ್ಞಾಚಾರ್ಯರು ಒಪ್ಪಿಕೊಂಡರು ಅವರಿಗೆ ಜನ ತೆಯ ಮನದಲ್ಲಿಯ ಕುತೂಹಲವು ತಿಳಿದೇ ಇತ್ತು. ರಾಜನು ಆನೆಯ ಮೇಲೆ ಕೂಡಿರೆಂದು ವಿಜ್ಞಾಪಿಸಿದನು ಆದರೆ ಯತಿಗಳಿಗೆ ಯಾನಾ ರೋಹಣವು ನಿಷಿದ್ಧವಾದ ಪ್ರಯುಕ್ತ ಆಚಾರ್ಯರು ಒಪ್ಪಲಿಲ್ಲ. ಶಿಷ್ಯನ ಹೆಗಲ ಮೇಲೆ ಕುಳಿತು ನಡೆದ ಶ್ರೀಮದಾನಂದತೀರ್ಥರ ಮೂರ್ತಿಯನ್ನು ಕಂಡು ಜನತೆಯ ಕಣ್ಣುಗಳು ತೃಪ್ತವಾದವು ಎಲ್ಲರೂ ತಮ್ಮ ತಮ್ಮ ಬುದ್ಧಿಗೆ ಅನುರೂಪವಾಗಿ ಇವರನ್ನು ವರ್ಣಿಸತೊಡ

ಗಿವರು. ಇವರ ಮೇಲೆ ಶ್ವೇತಚ್ಛತ್ರವನ್ನು ಸ್ವತಃ ರಾಜನೇ ಹಿಡಿದನು. ಮಂತ್ರಿಗಳು ಚಾಮರ ಬೀಸುತ್ತಿದ್ದರು ಈ ಮೆರವಣಿಗೆಯು ಬಹು ವೈಭವದಿಂದ ನಡೆದು ಕುಂಬಳೆಯ ವಿಷ್ಣುಮಂಗಲ ದೇವಾಲಯಕ್ಕೆ ಬಂದಿತು. ಯಾರಿಗೂ ಬಿಸಲಿನ ಅರಿವಿಲ್ಲ. ಹಸಿವೆಯ ಪರಿವೆಯಿಲ್ಲ. ದಾರಿ ನಡೆದ ಶ್ರಮವಿಲ್ಲ ಉತ್ಸಾಹವು ಎಲ್ಲರಲ್ಲಿಯೂ ತುಂಬಿ ತುಳುಕುತ್ತಿತ್ತು. ಆಚಾರ್ಯರು ಇಳಿದು ದೇವರಿಗೆ ವಂದಿಸಿದರು. ಅವರ ಹಿಂದಿನಿಂದಲೇ ಜನೌಘವೆಲ್ಲ ದೇವಾಲಯ ಹೊಕ್ಕಿತು. ಆಚಾರ್ಯರ ಶಿಷ್ಯರಾದ ಹೃಷೀಕೇಶತೀರ್ಥರು ಶ್ರೀ ಭಾಗವತವನ್ನು ಹೇಳ ಹತ್ತಿದರು. ದಶಮಸ್ಕಂದವು ನಡೆದಿದೆ. ಭಗವಾನ್ ಶ್ರೀಕೃಷ್ಣನ ಲಿಲಾ ಪ್ರಸಂಗವನ್ನೇ ಆಚಾರ್ಯರು ಎತ್ತಿ ವಿಚಿತ್ರ ಅರ್ಥಗಳನ್ನು ಜನರಿಗೆ ತಿಳಿಸಿದರು. ಜನತೆಯು ಆನಂದ ಮಗ್ನವಾಗಿ ಭಕ್ತಿರಸದಲ್ಲಿ ಲೋಲಾಡ ಹತ್ತಿತು.

## ದಿನಚರ್ಯೆ.

ಶ್ರೀಮದಾಚಾರ್ಯರು ಅಲ್ಲಿಯೇ ಕೆಲವು ದಿನ ವಾಸಮಾಡಿದರು. ದಿನಾಲು ಬ್ರಾಹ್ಮಮುಹೂರ್ತದಲ್ಲಿ ಎದ್ದು ಸ್ನಾನ ಜಪಾನುಷ್ಠಾನ ಮಾಡಿ ಯತಿಜನೋಚಿತವಾದ ಹಂಸಧ್ಯಾನವನ್ನು ಮಾಡುತ್ತಿದ್ದರು. ನಂತರ ಪದ್ಮಾಸನದಲ್ಲಿ ಕುಳಿತು ಪ್ರಾಣಯಾಮಪೂರ್ವಕ ಪ್ರಣವ ಜಪವನ್ನು ಮಾಡುತ್ತಿದ್ದರು. ಇಷ್ಟರಲ್ಲಿ ಇವರ ಶಿಷ್ಯಸಂಘವೆಲ್ಲ ಸ್ನಾನ ಸಂಧ್ಯಾದಿಗಳನ್ನು ತೀರಿಸಿಕೊಂಡು ಗುರುಗಳ ಸೇವೆಯಲ್ಲಿ ತತ್ಪರರಾಗುತ್ತಿದ್ದರು. ಆ ಮೇಲೆ ಆಚಾರ್ಯರು ವ್ಯಾಸ ಪ್ರತಿಮೆಗಳ ಚಕ್ರಾಂಕಿತಗಳ, ಪೂಜೆಯನ್ನು ಮಾಡಿ ಶಂಖೋದಕದಿಂದ ಅರ್ಘ್ಯ ಕೊಡುತ್ತಿದ್ದರು. ಹೀಗೆ ಪೂರ್ವಾನುಷ್ಠಾನವನ್ನು ಮುಗಿಸಿ ಶ್ರೀ ಸೀತಾವಲ್ಲಭ ರಾಮಚಂದ್ರ ಪ್ರಭುವನ್ನು ಸ್ಮರಿಸಿ ನಿರ್ಮಾಲ್ಯವನ್ನು ತೆಗೆಯುತ್ತಿದ್ದರು. ಇದನ್ನು ನೋಡಿದ ಶಿಷ್ಯಸಂದೋಹವು ತಾವೇ ಧನ್ಯರೆಂದು ತಿಳಿದುದರಲ್ಲಿ ಸಂದೇಹವೇನು? ಒಂದು ದಿನ ನಿರ್ಮಾಲ್ಯವನ್ನು ತೆಗೆಯುವ ಕಾಲಕ್ಕೆ ಶಾಲಿಗ್ರಾಮದ ಮೇಲೆ ಅವೃತವು ಬಿದ್ದಿತ್ತು.

ಅದನ್ನು ನೋಡಿ ಶಿಷ್ಯರು ತಮ್ಮಿಂದಲೇ ಈ ಪ್ರಮಾದವು ಘಟಿಸಿರ ಬಹುದೆಂದು ತಿಳಿದು ಗಾಬರಿಗೊಂಡರು. ಆಚಾರ್ಯರು ಇದನ್ನರಿತು “ಇದು ಅಮೃತ; ತುಪ್ಪವಲ್ಲ. ಬೆದರುವ ಕಾರಣವಿಲ್ಲ” ಎಂದು ಹೇಳಿದರು. ಹೀಗೆ ದಿನಾಲು ಆಚಾರ್ಯರು ತಮ್ಮ ಅನುಷ್ಠಾನದಲ್ಲಿ ನಿರತರಾದ ಕಾಲಕ್ಕೆ ಶಿಷ್ಯರೆಲ್ಲರೂ ವೇದಗಳನ್ನೂ ಉಪನಿಷತ್ತುಗಳನ್ನೂ ಸುಂದರವಾಗಿ ಅನ್ನುತ್ತಿದ್ದರು. ಕೆಲವರು ಮೊದಲಿನ ದಿನ ಹೇಳಿದ ಪ್ರವಚನದ ಮನನ ಮಾಡುತ್ತಿದ್ದರು.

ಈ ಎಲ್ಲ ಕಾರ್ಯಗಳನ್ನು ಸೂರ್ಯೋದಯಕ್ಕೆ ಮೊದಲು ಮುಗಿಸಿಕೊಂಡು ಸರ್ವಜ್ಞಾಚಾರ್ಯರು ಹೊರಗೆ ಬರುವಷ್ಟರಲ್ಲಿ ಜನ ಸಮೂಹವು ಅವರ ದರ್ಶನಕ್ಕೆ ಉತ್ಸುಕವಾಗಿ ಕುಳಿತಿತ್ತು. ಆಚಾರ್ಯರು ಕೃಷ್ಣಾಜಿನದ ಮೇಲೆ ಬಂದು ಕುಳಿತ ಕೂಡಲೆ ಶಿಷ್ಯರೂ ಜನಸಮೂಹವೂ ಅವರಿಗೆ ವಂದನೆ ಮಾಡಿ ಸುತ್ತೆಲೂ ಕುಳಿತುಕೊಂಡ ನಂತರ ಪ್ರವಚನಕ್ಕೆ ಪ್ರಾರಂಭವಾಗಿ ಮಧ್ಯಾನ್ಹದ ವರೆಗೆ ನಡೆಯುತ್ತಿತ್ತು. ಸೂರ್ಯನು ನೆತ್ತಿಯ ಮೇಲೆ ಬಂದೊಡನೆಯೇ ಆಚಾರ್ಯರು ಶಿಷ್ಯಪರಿವಾರದೊಂದಿಗೆ ಪುನಃ ಸ್ನಾನಮಾಡಿಕೊಂಡು ಶ್ರೀರಾಮ ಮೂರ್ತಿಯ ಪೂಜೆಮಾಡಿ ಶಿಷ್ಯಪರಿವಾರಕ್ಕೆಲ್ಲ ತೀರ್ಥ ಪ್ರಸಾದವನ್ನು ಕೊಟ್ಟು ಶಿಷ್ಯರೊಂದಿಗೆ ಭೋಜನ ಮಾಡುತ್ತಿದ್ದರು. ಆ ಕಾಲಕ್ಕೆ ಕೂಡ ಪರಮಾತ್ಮ ವಿಷಯಕ ಚರ್ಚೆಯೇ ಅವ್ಯಾಹತವಾಗಿ ನಡೆಯುತ್ತಿತ್ತು. ನಂತರ ಮತ್ತೆ ಪ್ರವಚನವು ಪ್ರಾರಂಭವಾಗಿ ಸಂಜೆಯ ವರೆಗೂ ನಡೆಯುತ್ತಿತ್ತು.

## ಶ್ರೀ ತ್ರಿವಿಕ್ರಮ ಪಂಡಿತರು.

ಆಚಾರ್ಯರು ಹೀಗೆ ಮಾಯಾವಾದಮತವನ್ನು ನಿರಾಸ ಮಾಡಿ ಅನೇಕ ವಿದ್ವಾಂಸರನ್ನು ಗೆದ್ದು ದ್ವೈತಸಿದ್ಧಾಂತವನ್ನು ಸ್ಥಾಪಿಸಹತ್ತಿದ್ದು ಕೇಳಿ ಮಾಯಾವಾದಿಗಳೆಲ್ಲ ತಮಗೆ ಅವಮಾನವಾಗಬಾರದೆಂದು ಎಲ್ಲಿಯೋ ಓಡಿ ಹೋದರು. ಅವರಲ್ಲಿಯೂ ಕೆಲವರು ನಿರಭಿಮಾನ

ವೃತ್ತಿಯಿಂದ ಮಾಯಾಸಿದ್ಧಾಂತವನ್ನೂ ಅವರ ಖಂಡನವನ್ನೂ ಕೇಳಿ ಸಾರಾಸಾರ ವಿಚಾರಕ್ಕೆ ಪ್ರಾರಂಭ ಮಾಡಿದರು. ವಿಷ್ಣುಮಂಗಲದ ಸಮೀಪಕ್ಕೆ ಇದ್ದ "ಕಾವು''ಮಠದ ತ್ರಿವಿಕ್ರಮಾಚಾರ್ಯರು ಅದ್ವೈತ ಸಿದ್ಧಾಂತದಲ್ಲಿ ಮಹಾಪ್ರವೀಣರು. ಇವರ ಕೈ ಹಿಡಿಯುವವರು ಯಾರೂ ಇರಲಿಲ್ಲ. ಎಲ್ಲ ಮಾಯಾವಾದಿಗಳ ವಿಶ್ವಾಸವು ಇವರಲ್ಲಿ ಬಹಳ. ಇವರೇ ಅವರಿಗೆಲ್ಲರಿಗೆ ಆಧಾರಸ್ತಂಭ. ಒಂದೂಕಾಲು ಲಕ್ಷ ಗ್ರಂಥವು ಇವರಿಗೆ ಮುಖೋದ್ಗತ. ಮಧ್ವಶಿಷ್ಯರಾಗಾದರೂ ಇವರನ್ನು ತಡವಿದರೆ ಅವರನ್ನು ಮದ್ದಾನೆಯು ಹುಡುಗರ ಗುಂಪನ್ನು ಓಡಿಸು ವಂತೆ ಓಡಿಸಿಬಿಡುತ್ತಿದ್ದರು. ಆದರೂ ದುರಾಗ್ರಹಿಗಳಲ್ಲ. ಶ್ರೀಮದಾ ನಂದತೀರ್ಥರನ್ನು ಗೆಲ್ಲಬೇಕೆಂದು ಇವರು ಮನಸ್ಸಿನಲ್ಲಿ ಮಾಡಿದರು. ಅವರನ್ನು ಪ್ರತ್ಯಕ್ಷ ಕಾಣುವ ಮೊದಲು ಅವರ ಅಭಿಪ್ರಾಯವನ್ನೂ ಕೋಟಿಕ್ರಮಗಳನ್ನೂ ತಿಳಿದುಕೊಳ್ಳಬೇಕೆಂದು ಹವಣಿಸಿದರು. ಆಚಾ ರ್ಯರು ಬರೆದ ಗ್ರಂಥಗಳನ್ನು ನೋಡಬೇಕೆಂದು ಆಲೋಚಿಸಿ ಶ್ರೀ ಶಂಕರಭಟ್ಟರ ಹತ್ತಿರ ಬಂದರು. ಅವರಿಗೆ ಏನೇನೋ ಹೇಳಿ ಶ್ರೀಮದಾ ನಂದತೀರ್ಥರ ಗ್ರಂಥಗಳನ್ನು ಇಸಗೊಂಡು ನೋಡಿದರು. ಓದಿದರು. ಮನನ ಮಾಡಿದರು. ಕೂಡಲೆ ಮನದಲ್ಲಿ ಏನೋ ನಿಶ್ಚಯಿಸಿದರು. ಶ್ರೀಮನ್ಮಧ್ವಾಚಾರ್ಯರೊಂದಿಗೆ ವಾದ ಹಾಕುವೆನೆಂದು ತನ್ನ ಪರಿವಾ ರಕ್ಕೆಲ್ಲ ಹೇಳಿದರು. ಇದೇ ಸಮಯಕ್ಕೆ ಸರ್ವಜ್ಞಾಚಾರ್ಯರು ವಿಷ್ಣು ಮಂಗಲಕ್ಕೆ ಸಮೀಪದಲ್ಲಿದ್ದ ಕುಡಿಲು ಎಂಬ ಊರಲ್ಲಿಯ ದೇವಾಲ ಯವೊಂದರಲ್ಲಿ ಇರುತ್ತಿದ್ದರು. ಅಲ್ಲಿಗೆ ತ್ರಿವಿಕ್ರಮ ಪಂಡಿತರು ಬಂದರು. ಅವರೊಂದಿಗೆ ಅವರ ಪರಿವಾರವೂ ಇತ್ತು. ಎಲ್ಲರೂ ಆಚಾರ್ಯರ ಸಮ್ಮುಖದಲ್ಲಿ ಕುಳಿತರು. ಆನಂದತೀರ್ಥರು ಬ್ರಹ್ಮ ಸೂತ್ರ ವ್ಯಾಖ್ಯಾನವನ್ನು ಹೇಳಲು ಪ್ರಾರಂಭಿಸಿದ್ದರು. ಶ್ರೀಮದಾ ಚಾರ್ಯರು ಪರಮತಖಂಡನಪೂರ್ವಕ ಸ್ವಮತಮಂಡನವನ್ನು ಸಮೀಚೀನವಾಗಿ ಮಾಡುತ್ತಿದ್ದ ಕಾಲಕ್ಕೆ ಶ್ರೀ ತ್ರಿವಿಕ್ರಮ ಪಂಡಿತರು ನಡುವೆ ಸಂದೇಹ ತೆಗೆದು ವಾದಕ್ಕೆ ಪ್ರಾರಂಭ ಮಾಡಿದರು. ವಾದವು ನಡೆಯಿತು. ಒಂದೇ ಸವನೆ ಹದಿನೈದು ದಿವಸಗಳ ವರೆಗೆ ವಾದವು

ಅವ್ಯಾಹತವಾಗಿ ಸಾಗಿತು. ಯಾರು ಜಯಿಸುವರೋ ಎಂದು ಎಲ್ಲರೂ ಕುತೂಹಲಚಿತ್ತರಾಗಿ ನಿರೀಕ್ಷಿಸುತ್ತಿದ್ದರು. ಕೊನೆಗೆ ಹದಿನೈದನೇ ದಿವಸ ತ್ರಿವಿಕ್ರಮಪಂಡಿತರು ನಿರುತ್ತರರಾದರು. ಪೂರ್ಣಬೋಧರಿಗೆ ನಮಸ್ಕರಿಸಿ ಕ್ಷಮಿಸಬೇಕೆಂದು ಬೇಡಿಕೊಂಡರು. ಮುಂದೆ ಅಲ್ಲಿಯೇ ಶಿಷ್ಯತ್ವವನ್ನು ವಹಿಸಿ ಭಾಷ್ಯವ್ಯಾಖ್ಯಾನವನ್ನು ಕೇಳಿದರು. ತ್ರಿವಿಕ್ರಮಾಚಾರ್ಯರ ಚಾತುರ್ಯವನ್ನೂ ಪಾಂಡಿತ್ಯವನ್ನೂ ಕಂಡು ಶ್ರೀಮದಾಚಾರ್ಯರು ಬೆರಗಾಗಿದ್ದರು. ಅವರು ದ್ವೈತಮತವನ್ನು ಸ್ವೀಕರಿಸಿದ್ದರಿಂದ ಶ್ರೀಮದಾಚಾರ್ಯರಿಗೆ ತುಂಬಾ ಸಮಾಧಾನವಾಯಿತು. ಈ ಹೊಸ ಚತುರ ಶಿಷ್ಯರಿಗೆ ಭಾಷ್ಯಕ್ಕೆ ಟೀಕೆ ಬರೆಯಲು ಆಚಾರ್ಯರು ಅಪ್ಪಣೆ ಮಾಡಿದರು. ಆ ಅಪ್ಪಣೆಯನ್ನು ಮನ್ನಿಸಿ ತತ್ವಪ್ರದೀಪವೆಂಬ ಗ್ರಂಥವನ್ನು ತ್ರಿವಿಕ್ರಮಪಂಡಿತರು ಬರೆದರು.

ಶ್ರೀಮನ್ಮಧ್ವಾಚಾರ್ಯರ ಗ್ರಂಥಗಳನ್ನೆಲ್ಲ ತ್ರಿವಿಕ್ರಮಪಂಡಿತರು ಮೊದಲೇ ಓದಿ ಮನನ ಮಾಡಿದ್ದರು. ಆದರೂ ಅವರಿಗೆ ಹೆಚ್ಚಿನದೊಂದು ಗ್ರಂಥವು ಆಚಾರ್ಯರ ಮುಖದಿಂದ ಬೇಕೆನಿಸಿತು. ಅಮೃತವು ಯಾರಿಗೆ ಸಾಕೆನಿಸುವದು? ತಮ್ಮ ಮನೀಷೆಯನ್ನು ಆಚಾರ್ಯರಿಗೆ ತಿಳಿಸಿದರು. ಆಚಾರ್ಯರೂ “ಒಳ್ಳೇದು'' ಎಂದು ಹೇಳಿ ನಾಲ್ಕು ಜನ ಶಿಷ್ಯರಿಗೆ ಗ್ರಂಥ ಬರೆಯಲು ಹೇಳಿದರು. ನಾಲ್ವರಿಗೂ ನಾಲ್ಕು ಶ್ಲೋಕಗಳನ್ನು ಒಮ್ಮೆಲೇ ಹೇಳಬೇಕು; ಅವರು ಬರೆಯಬೇಕು. ಹೀಗೆ ಕ್ರಮವು ನಡೆಯಿತು ಕೊನೆಗೆ ಈ ನಾಲ್ವರೂ ಬರೆದ ನಾಲ್ಕು ಅಧ್ಯಾಯಗಳೇ ಕೂಡಿ ಒಂದು ಅನುವ್ಯಾಖ್ಯಾನವಾಯಿತು. ಹೀಗೆ ಅನುವ್ಯಾಖ್ಯಾನವನ್ನು ಆಚಾರ್ಯರು ಹೇಳುವದನ್ನೂ ಅದರ ಪರಸ್ಪರ ಸಂಬಂಧವನ್ನೂ ನೋಡಿ ಎಲ್ಲರೂ ಅಚ್ಚರಿಗೊಂಡರು.

ಇದೇ ಸಮಯಕ್ಕೆ ಪಾಜಕಾಕ್ಷೇತ್ರದಲ್ಲಿ ಸರ್ವಜ್ಞರ ತಾಯಿ ತಂದೆಗಳು ವೈಕುಂಠವಾಸಿಗಳಾಗಿದ್ದರು. ಅವರ ಅಂತ್ಯಕರ್ಮಗಳನ್ನು ಶ್ರೀಮದಾಚಾರ್ಯರ ತಮ್ಮನು ಮುಗಿಸಿದ್ದನು. ಅವನೂ ಆಚಾರ್ಯರ ಹತ್ತರ ಬಂದು ವಂದಿಸಿದನು. ಅತ್ಯಂತ ವಿನಯದಿಂದ, ಆತು

ರತೆಯಿಂದ ಸಂನ್ಯಾಸಾಶ್ರಮವನ್ನು ಕೊಡಬೇಕೆಂದು ಬಿನ್ನವಿಸಿದನು. ಸರ್ವಜ್ಞರು ತಮ್ಮನ ಮನೋಗತವನ್ನು ತಿಳಿದು ವಿರಕ್ತಿಯು ಹುಟ್ಟಿದುದನ್ನು ಅರಿತು ಅವನಿಗೂ ಸಂನ್ಯಾಸಾಶ್ರಮವನ್ನು ಕೊಟ್ಟು ವಿಷ್ಣುತೀರ್ಥರೆಂಬ ಹೆಸರನ್ನು ಇಟ್ಟರು. ಇವರೇ ಸುಬ್ರಹ್ಮಣ್ಯಮಠದ ಮೂಲ ಪುರುಷರು. ವಿಷ್ಣುತೀರ್ಥರು ಜಗದ್ಗುರುಗಳಾದ ಸರ್ವಜ್ಞರಿಂದ ಉಪದೇಶ ಹೊಂದಿ ಅನುಜ್ಞೆ ಪಡೆದು ತೀರ್ಥಯಾತ್ರೆಗಳನ್ನು ಮಾಡುತ್ತ ಮಾಡುತ್ತ ಹಿಮಾಲಯಕ್ಕೆ ಹೋದರು. ಅಲ್ಲಿ ಬಿಲ್ವಪತ್ರಗಳನ್ನು ಮಾತ್ರ ತಿನ್ನುತ್ತ ಬಹು ದಿನಗಳ ವರೆಗೆ ತಪಸ್ಸು ಮಾಡಿ ಯೋಗಿಗಳಿಗೆ ದುರ್ಲಭವಾದ ಸಮಾಧಿಸಿದ್ಧಿಯನ್ನು ಹೊಂದಿ ಶ್ರೀ ಬದರೀನಾಥನನ್ನು ಸೇವಿಸುತ್ತಿದ್ದರು.

## ಶಿಷ್ಯವರ್ಗವನ್ನು ಅನುಗ್ರಹಿಸಿದ್ದು.

ಇತ್ತ ಆಚಾರ್ಯರು ಉಡುಪಿಯ ಸಮೀಪಕ್ಕೆ ಬಂದುದನ್ನು ಕೇಳಿ ಆ ಊರ ಜನರಿಗೆಲ್ಲ ಬಹಳೇ ಉತ್ಸವವಾಯಿತು. ಎಲ್ಲರಲ್ಲಿಯೂ ಆನಂದವು ಉಕ್ಕೇರಿತು. ಅನಿರುದ್ಧರೆಂಬವರೋರ್ವರು ಆಚಾರ್ಯರ ಶಿಷ್ಯರು. ಸರ್ವಜ್ಞರ ಹತ್ತರ ಬಂದು ಉಡುಪಿಯವರ ಮನೋಗತವನ್ನು ತಿಳಿಸಿದರು. ಅಲ್ಲಿಗೆ ಬರಬೇಕೆಂದು ಒತ್ತಾಯಪಡಿಸಿದರು. ಆಚಾರ್ಯರು ಶಿಷ್ಯಪರಿವಾರದೊಂದಿಗೆ ಉಡುಪಿಗೆ ಬಂದು ಅಲ್ಲಿ ಕೆಲವು ದಿನ ವಾಸಮಾಡಿದರು. ಅಲ್ಲಿಯೇ ಸಮೀಪದಲ್ಲಿರುವ ಕುಮಾರ ಪರ್ವತಕ್ಕೆ ಹೋಗಿ ಅಲ್ಲಿ ತಪವನ್ನಾರಂಭಿಸಿದರು. ಆಚಾರ್ಯರು ಗೋದಾವರೀ ತೀರಕ್ಕೆ ಹೋದ ಕಾಲಕ್ಕೆ ಅವರೊಂದಿಗೆ ವಾದದಲ್ಲಿ ಸೋತು ಶಿಷ್ಯತ್ವವನ್ನು ವಹಿಸಿದ ಶೋಭನಭಟ್ಟರೂ ಶಾಮಿಶಾಸ್ತ್ರಿಗಳೂ ಆಚಾರ್ಯರನ್ನು ಕಾಣಲು ಅಲ್ಲಿಗೆ ಬಂದಿರುವರು. ಅವರಿಗೆ ಸನ್ಯಾಸಾಶ್ರಮವನ್ನು ಸ್ವೀಕರಿಸುವ ಅಭಿಲಾಷೆ ಹೆಚ್ಚಾಗಿದೆ. ಸರ್ವಜ್ಞರನ್ನು ಅಭಿವಂದಿಸಿ ಮನದಂದವನ್ನು ಹೇಳಿದರು. ಗುರುಗಳೂ ಅವರ ಅಭಿಲಾಷೆಯಂತೆ ಚತುರ್ಥಾಶ್ರಮವನ್ನು ಕೊಟ್ಟು ಶೋಭನಭಟ್ಟರಿಗೆ ಪದ್ಮ

ನಾಭತೀರ್ಥರೆಂಬ ಹೆಸರನ್ನು ಇಟ್ಟರು. ಶಾಮಿಶಾಸ್ತ್ರಿಗಳಿಗೆ ನರಹರಿ ತೀರ್ಥರೆಂಬ ಹೆಸರು ಕೊಟ್ಟರು. ಮಾಧವತೀರ್ಥರೂ ಅಕ್ಷೋಭ್ಯತೀರ್ಥರೂ ಆಶ್ರಮ ಸ್ವೀಕಾರ ಮಾಡಿದರು. ಹೀಗೆ ನಾಲ್ವರೂ ಶಿಷ್ಯರು ನಾಲ್ಕು ದಿಗ್ಗಜಗಳಂತೆ ನಾಲ್ಕೂ ದಿಗಂತಗಳಿಗೆ ಹೋಗಿ ದಿಗ್ವಿಜಯ ಮಾಡಹತ್ತಿದರು. ಈ ಶಿಷ್ಯರಿಗೂ ಶಿಷ್ಯ ಸಮೂಹವು ಬೆನ್ನು ಹತ್ತಿ ಅವರೊಂದಿಗೆ ಸರ್ವಜ್ಞಾಚಾರ್ಯರ ದರ್ಶನ ತಕ್ಕೊಂಡು ಉಪದೇಶ ಕೇಳಬೇಕೆಂದು ತಂಡೋಪತಂಡವಾಗಿ ಬರಹತ್ತಿತು. ಪದ್ಮನಾಭ ತೀರ್ಥರು ತಾವು ಬರೆದ ನ್ಯಾಯರತ್ನಾವಲಿ ಎಂಬ ಗ್ರಂಥವನ್ನು ಆಚಾರ್ಯರಿಗೆ ಕಾಣಿಕೆಯಾಗಿ ಅರ್ಪಿಸಿದರು. ವಿಷ್ಣುತೀರ್ಥರು (ಸೌದೇ ಮಠ) ಜನಾರ್ದನತೀರ್ಥರು (ಕೃಷ್ಣಾಪುರಮಠ) ವಾಮನತೀರ್ಥರು (ಕಾಣಮೂರಮಠ) ನರಸಿಂಹತೀರ್ಥರು (ಅಧಮಾರುಮಠ) ಉಪೇಂದ್ರ ತೀರ್ಥರು (ಪುತ್ತಿಗೆಮಠ) ರಾಮತೀರ್ಥರು (ಪಲಮಾರುಮಠ) ಅಕ್ಷೋಭ್ಯತೀರ್ಥರು (ಪೇಜಾವರಮಠ) ಶಿಷ್ಯ ಪರಿವಾರದೊಂದಿಗೆ ಆಚಾರ್ಯರಿದ್ದ ಉಡುಪಿಗೆ ಬಂದರು. ಶ್ರೀಕೃಷ್ಣನನ್ನೂ ಅನಂತೇಶನನ್ನೂ ವಂದಿಸಿ ಧನ್ಯತೆಯನ್ನು ಹೊಂದಿದರು ಶ್ರೀಕೃಷ್ಣನ ಅರ್ಚಕರಾದ ಇವರೆಲ್ಲರೂ ವೈರಾಗ್ಯಜ್ಞಾನ ಸಂಪನ್ನರಾಗಿದ್ದರೂ ಗುರುಗಳಿಂದ ಉಪದೇಶವನ್ನು ಪಡೆದು ಕೃತಾರ್ಥರಾದರು. ಹೀಗೆ ಶ್ರೀಮನ್ಮಧ್ವಾಚಾರ್ಯರ ಶಿಷ್ಯಪ್ರಶಿಷ್ಯರು ಅಖಿಲ ಹಿಂದುಸ್ಥಾನದಲ್ಲಿ ಪಸರಿಸಿದರು. ಎಲ್ಲಿ ನೋಡಿದಲ್ಲಿ ಮಧ್ವಸಿದ್ಧಾಂತದ ಕೀರ್ತಿಯು ವ್ಯಾಪಿಸಿತು. ಆಚಾರ್ಯರು ಉಡುಪಿಯಿಂದ ಹೊರಟು ಮಂಜೇಶ್ವರದ ಹತ್ತಿರಿರುವ ಕಾಣ್ವತೀರ್ಥಕ್ಕೆ ಸಮೀಪದಲ್ಲಿದ್ದ ದೇವಾಲಯಕ್ಕೆ ಬಂದು ಅಲ್ಲಿಯೇ ಚಾತುರ್ಮಾಸಕ್ಕಾಗಿ ಕುಳಿತರು.

ಒಂದು ದಿನ ಸರ್ವಜ್ಞಾಚಾರ್ಯರು ಪ್ರವಚನ ಹೇಳುತ್ತ ಕುಳಿತಿದ್ದರು. ಎದುರಿನಲ್ಲಿ ನಾಲ್ವರೂ ಪ್ರಮುಖ ಶಿಷ್ಯರು ಗ್ರಂಥಗಳನ್ನು ನೋಡುತ್ತ ಕುಳಿತಿರುವರು. ಪ್ರವಾಸದಲ್ಲಿ ಗ್ರಂಥಭಾರವನ್ನು ಹೊತ್ತು ಕೊಂಡು ತಿರುಗಾಡುವ ಎತ್ತು ಅಲ್ಲಿಯೇ ಸಮೀಪದಲ್ಲಿ ಕುಳಿತು

ಆನಂದತೀರ್ಥರ ಮುಖದಿಂದ ಹೊರಟ ಉಪದೇಶವನ್ನು ಕೇಳಿ ತಲೆ ದೂಗುತ್ತಲಿತ್ತು. ಅರೆಗಣ್ಣು ಮುಚ್ಚಿ ಕಿವಿಗಳನ್ನು ಮುಂದೆ ಮಾಡಿ ಆಚಾರ್ಯರನ್ನೇ ನೋಡುತ್ತಿತ್ತು. ಪ್ರವಚನ ಮುಗಿಯಿತು. ಶಿಷ್ಯರಲ್ಲಿ ತಾವೇ ಸರ್ವಜ್ಞಾಚಾರ್ಯರಿಗೆ ಅಭಿಮತ ಶಿಷ್ಯ ಶ್ರೇಷ್ಠರೆಂದು ಸ್ವಲ್ಪ ಅಹಂಕಾರದ ಪ್ರಾದುರ್ಭಾವವಾಯಿತು. ಆಗ ಅವರು ಸ್ವಾಮೀ ತಾವು ಬರೆದ ಗ್ರಂಥಗಳಿಗೆ ಟೀಕೆಯನ್ನಾರು ಬರೆಯುವರು ? ಎಂದು ಆಚಾರ್ಯರನ್ನು ಕೇಳಿದರು. ಆಚಾರ್ಯರಿಂದ " ನೀವೇ ಮಾಡುವವರು. ಮತ್ತಿನ್ನಾರು? " ಎಂದೇ ಉತ್ತರ ಬರುವದೆಂದು ಅವರ ಮನದ ಮಂಡಿಗೆ. ಆದರೆ ಆಚಾರ್ಯರು ನಕ್ಕರು. " ಈ ಎತ್ತು ನನ್ನ ಗ್ರಂಥಗಳಿಗೆ ಟೀಕೆ ಬರೆಯುವದು " ಎಂದು ಉತ್ತರ ಹೇಳಿದರು. ಇದನ್ನು ಕೇಳಿ ಶಿಷ್ಯರಿಗೆ ವಿಷಾದವಾಯಿತು. ನರಹರಿತೀರ್ಥರಿಗೆ ಸಿಟ್ಟು ಮಿತಿಮೀರಿತು. ಕೂಡಲೆ ಈ ಎತ್ತು ಹಾವು ಕಡಿದು ಸಾಯಲೆಂದು ಶಪಿಸಿದರು. ಯೋಗಿಗಳ ವಾಕ್ಯವು ಹುಸಿಯಾಗುವದೇ! ಕೃಷ್ಣಸರ್ಪವು ಭುಸುಗುಡುತ್ತ ಬಂದಿತು. ಎತ್ತನ್ನು ಕಚ್ಚಿತು. ಸರ್ವಜ್ಞರು ಇದನ್ನೆಲ್ಲ ನೋಡಿ ವಿಷಾದಬಟ್ಟರು. ಎತ್ತಿನ ಬಾಯಿಯಿಂದ ಬುರುಗು ಬರಹತ್ತಿದೆ. ಕೂಡಲೆ ಆಚಾರ್ಯರು ಎತ್ತಿಗೆ ಅಜ್ಞೆ ಮಾಡಿದರು ದ್ವಾದಶ ಸ್ತೋತ್ರವನ್ನು ಅನ್ನು ಎಂದು. ಎತ್ತು ದ್ವಾದಶಸ್ತೋತ್ರವನ್ನು ಅನ್ನಹತ್ತಿತು. ಸ್ತೋತ್ರವು ಮುಗಿಯುತ್ತ ಬಂದ ಹಾಗೆ ವಿಷದ ಉಗ್ರಸ್ವರೂಪವು ಕಡಿಮೆಯಾಯಿತು. ಸ್ತೋತ್ರವೂ ಮುಗಿಯಿತು. ಎತ್ತು ವಿಷಬಾಧೆಯಿಂದ ಮುಕ್ತವಾಯಿತು. ಇದನ್ನು ನೋಡಿ ಎಲ್ಲರಿಗೂ ಸೋಜಿಗವೆನಿಸಿದೆ. ಶಿಷ್ಯರಿಗೆ ಪಶ್ಚಾತ್ತಾಪವು ಮಿತಿಮೀರಿದೆ. ನಾಲ್ವರೂ ಕಣ್ಣೀರು ಸುರಿಸುತ್ತಾರೆ. ಹೆಚ್ಚಾಗಿ ನರಹರಿತೀರ್ಥರಿಗೆ ಗುರುದ್ರೋಹ ಘಟಿಸಿದ ದುಃಖವಾಗಿದೆ. ಆನಂದತೀರ್ಥರು ಅವರನ್ನು ಸಮಾಧಾನಪಡಿಸಿದರು.

### ಮೂಲ ಸೀತಾರಾಮರ ಪೂಜೆ.

ಆದರೆ ನರಹರಿತೀರ್ಥರಿಗೆ ಮನದಲ್ಲಿ ಸಮಾಧಾನವಿಲ್ಲ. ತಾವು ಮಾಡಿದ ತಪ್ಪಿಗಾಗಿ ಒಳಗಿಂದೊಳಗೇ ಕೊರಗುತ್ತಿರುವರು. ಒಂದು

ದಿನ ಏಕಾಂತದಲ್ಲಿ ಗುರುಗಳನ್ನು ಕಂಡು ಮನೋಗತವನ್ನು ತಿಳಿಸಿದರು. ತಾವು ಮಾಡಿದ ಅಪರಾಧಕ್ಕೆ ಕ್ಷಮೆ ಬೇಡಿದರು. ಪ್ರಾಯಶ್ಚಿತ್ತವೇನೆಂದು ಕೇಳಿದರು. ಇದಕ್ಕೆ ಶ್ರೀಮದಾಚಾರ್ಯರು ಶ್ರೀಮೂಲರಾಮ ಹಾಗು ಶ್ರೀಸೀತಾದೇವಿಯವರ ಪ್ರತಿಮೆಗಳನ್ನು ತಂದು ಕೊಡಬೇಕೆಂದು ಹೇಳಿದರು. ಅವುಗಳನ್ನು ಎಲ್ಲಿಂದ ಹೇಗೆ ತರಬೇಕೆಂಬದನ್ನು ಆಜ್ಞಾಪಿಸಬೇಕೆಂದು ನರಹರಿತೀರ್ಥರು ಬಿನ್ನವಿಸಲು ಶ್ರೀಮದಾಚಾರ್ಯರು ಆ ಪ್ರತಿಮೆಗಳ ಇತಿವೃತ್ತವನ್ನೆಲ್ಲ ಅವರಿಗೆ ತಿಳಿಸಿದರು.

ಮೂಲ ಇಕ್ಷ್ವಾಕುರಾಜನಿಗೆ ಶ್ರೀಸೀತಾರಾಮರ ಪ್ರತಿಮೆಗಳು ಅವನ ಹಿರಿಯರಿಂದ ದೊರೆತಿದ್ದವು. ಇವು ವಂಶಪಾರಂಪರ್ಯವಾಗಿ ಶ್ರೀರಾಮಚಂದ್ರನ ಕಾಲದಲ್ಲಿಯೂ ಅವರ ಕುಲದೈವತವಾಗಿ ಇದ್ದವು. ಸೀತಾದೇವಿಯ ಉತ್ಕಟ ಅಪೇಕ್ಷೆಯ ಮೂಲಕ ಶ್ರೀರಾಮಚಂದ್ರನು ಇವುಗಳನ್ನು ಆವಳ ವಶದಲ್ಲಿಯೇ ಕೊಟ್ಟಿದ್ದನು. ಮುಂದೆ ಅವು ಲಕ್ಷ್ಮಣನ ವಶಕ್ಕೆ ಬಂದವು. ಅಯೋಧ್ಯೆಯೊಳಗಿನ ಬ್ರಾಹ್ಮಣನೊಬ್ಬನು ಶ್ರೀರಾಮನ ದರ್ಶನವಿಲ್ಲದೆ ಅನ್ನಗ್ರಹಣ ಮಾಡುತ್ತಿರಲಿಲ್ಲ. ಇದನ್ನರಿತು ಶ್ರೀರಾಮಚಂದ್ರನು ಈ ಪ್ರತಿಮೆಗಳನ್ನು ಆ ಬ್ರಾಹ್ಮಣನಿಗೆ ಕೊಡಿಸಿದನು. ಈ ಬ್ರಾಹ್ಮಣನ ಅಂತ್ಯಕಾಲಕ್ಕೆ ಇವುಗಳು ಭಕ್ತಾಗ್ರೇಸರನಾದ ಹನುಮಂತನ ವಶಕ್ಕೆ ಬಂದವು. ಮುಂದೆ ದ್ವಾಪರದಲ್ಲಿ ಸೌಗಂಧಿಕಾಹರಣದ ಕಾಲಕ್ಕೆ ಹನುಮಂತನು ಈ ಪ್ರತಿಮೆಗಳನ್ನು ಭೀಮಸೇನನಿಗೆ ಕೊಟ್ಟನು. ಪಾಂಡವರ ವಂಶದಲ್ಲಿ ಆಗಿ ಹೋದ ಕ್ಷೇಮಕಾಂತ ರಾಜನವರೆಗೆ ಇವು ಅಲ್ಲಿಯೇ ಇದ್ದವು. ಅಲ್ಲಿಂದ ಗಜಪುರಿಯ ರಾಜನ ವಂಶದವರ ಸ್ವಾಧೀನಕ್ಕೆ ಇವು ಬಂದವು. ಶ್ರೀಮದಾಚಾರ್ಯರು ಈ ಪ್ರತಿಮೆಗಳನ್ನು ತರಬೇಕೆಂದು ನರಹರಿತೀರ್ಥರಿಗೆ ಆಜ್ಞೆ ಮಾಡಿದ ಕಾಲಕ್ಕೆ ಗಜಪುರಿಯ ರಾಜನು ಮೃತನಾಗಿದ್ದನು. ಆತನು ಶ್ರೀಮದಾಚಾರ್ಯರ ಅನನ್ಯ ಭಕ್ತನಾಗಿದ್ದನು. ಮೃತರಾಜನ ಮಗುವು ತೀರ ಚಿಕ್ಕದಾಗಿತ್ತು. ಆದುದರಿಂದ ನರಹರಿತೀರ್ಥರು ಗಜಪುರಿಗೆ ಹೋಗಿ ಬಾಲರಾಜನು

ದೊಡ್ಡವನಾಗುವ ವರೆಗೆ ರಾಜ್ಯಭಾರವನ್ನು ಹೊತ್ತು ರಾಜ್ಯವಾಳಬೇಕೆಂದೂ ಆತನು ಪ್ರಬುದ್ಧನಾದ ಬಳಿಕ ಅವನ ಭಾಂಡಾರದೊಳಗಿನ ಈ ಪ್ರತಿಮೆಗಳನ್ನು ತರಬೇಕೆಂದೂ ಶ್ರೀಮದಾಚಾರ್ಯರು ತಮ್ಮ ಶಿಷ್ಯರಿಗೆ ಹೇಳಿದರು.

ತಮ್ಮ ಗುರುಗಳಿಂದ ಮನದ ದುಗುಡವೆಲ್ಲ ಪರಿಹಾರವಾಗಿ ದಾರಿಯೂ ತೋರಿಸಲ್ಪಟ್ಟಿತಾದುದರಿಂದ ನರಹರಿತೀರ್ಥರು ಕೂಡಲೆ ಗುರುಗಳ ಅಪ್ಪಣೆಯ ಮೇರೆಗೆ ಗಜಪುರಿಗೆ ಹೊರಟರು. ಅಲ್ಲಿ ಶ್ರೀಜಗನ್ನಾಥನಿಗೆ ವಂದಿಸಿ ರಾಜನಾಸ್ಥಾನದ ಸೂತ್ರಚಾಲಕರಾಗಿ ಕೆಲವು ಕಾಲ ಇದ್ದು ಅನೇಕ ಮಹತ್ಕಾರ್ಯಗಳನ್ನು ಮಾಡಿದರು. ರಾಜಕುಮಾರನು ದೊಡ್ಡವನಾದ ಬಳಿಕ–ಇವರು ಹೊರಡಲನುವಾಗಲು ರಾಜನು ಇವರನ್ನು ಆತ್ಮಾದರದಿಂದ ಸತ್ಕರಿಸಿ ಅಪ್ಪಣೆಯೇನೆಂದು ಕೇಳಿದನು. ನರಹರಿತೀರ್ಥರು ರಾಜನ ಸುವರ್ಣ ಭಾಂಡಾರದಲ್ಲಿದ್ದ ಶ್ರೀ ಸೀತಾರಾಮರ ಪ್ರತಿಮೆಗಳನ್ನು ಕೇಳಿದರು. ರಾಜನಿಗೆ ಅವುಗಳನ್ನು ಕೊಡಲು ಏನೂ ಅನುಮಾನವೆನಿಸಲಿಲ್ಲ. ಈ ಪ್ರತಿಮೆಗಳನ್ನು ನಾಲ್ಮೊಗಬೊಮ್ಮನು ಪೂಜಿಸಿರುವನೆಂಬುದು ಅವನಿಗೇನು ಗೊತ್ತು? ಪಾಪ ! ಪ್ರತಿಮೆಗಳೆರಡನ್ನೂ ತಂದು ಒಪ್ಪಿಸಿದನು. ನರಹರಿತೀರ್ಥರು ಅವುಗಳನ್ನು ಸ್ವೀಕರಿಸಿ ಕೃತಕೃತ್ಯರಾಗಿ ಮರಳಿ ಗುರುಗಳ ಕಡೆಗೆ ಹೊರಟರು. ದಾರಿ ನಡೆಯುವಾಗ ಹಿಂದೆ ಏನೋ ಸಪ್ಪಳವಾಯಿತು. ತಿರುಗಿ ನೋಡಿದರು. ರಾಜನ ಭಾಂಡಾರಕ್ಕೆ ಬೆಂಕಿ ಹತ್ತಿತ್ತು. ಮರಳಿ ಬರುವಾಗ ಹಿಂತಿರುಗಿ ನೋಡಕೂಡದೆಂದು ಗುರುಗಳ ಅಜ್ಞೆಯಾದದ್ದೂ ಅವರಿಗೆ ನೆನಪಾಯಿತು. ಆದರೆ ಮಾಡುವದೇನು ? ಮುಂದೆ ಶೀಘ್ರಗತಿಯಿಂದ ಪಿಂಗಳ ಸಂವತ್ಸರ ಆಶ್ವೀನ ಶುದ್ಧಪಂಚಮಿಯ ದಿವಸ ಶ್ರೀಮದಾನಂದತೀರ್ಥರ ಸನ್ನಿಧಿಗೆ ಬಂದು ವಂದಿಸಿ ಪ್ರತಿಮೆಗಳನ್ನು ಅರ್ಪಿಸಿದರು. ಪೂರ್ವಾವತಾರದಲ್ಲಿ ತಾವು ಪೂಜಿಸಿದ ಆ ಪ್ರತಿಮೆಗಳನ್ನು ಮತ್ತೆ ಸರ್ವಜ್ಞರು ಪೂಜಿಸಿದರು. ಅವೇ ಪ್ರತಿಮೆಗಳು ಇಂದಿಗೂ ಶಿಷ್ಯಪರಂಪರೆಯಿಂದ ಸಾಗಿಬಂದಿವೆ.

## ಪ್ರತಿವಾದಿಗಳ ಕೊನೆಯ ಪ್ರಯತ್ನ

ಶ್ರೀಮದಾಚಾರ್ಯರು ಮತ್ತೆ ಪ್ರವಾಸಕ್ಕೆ ಹೊರಟರು. ಗೋಮತೀ ತೀರಕ್ಕೆ ಬಂದಿರುವರು. ಅಲ್ಲಿ ಶೂದ್ರಭೂಪಾಲನೊಬ್ಬನು ವೇದಗಳೆಲ್ಲ ವ್ಯರ್ಥ ಬಡಬಡಿಕೆಯುಳ್ಳವುಗಳು ಮಾತ್ರವೆಂದು ತಿಳಿದಿದ್ದನು. ಆಚಾರ್ಯರ ಮುಂದೆ ಇದನ್ನು ಆಡಿಯೂ ತೋರಿಸಿದನು. ವೇದಪ್ರಾಮಾಣ್ಯವನ್ನು ಪ್ರತಿಪಾದಿಸುವ ಸರ್ವಜ್ಞರಿಗೆ ಇದು ಹೇಗೆ ಸಹನವಾಗಬೇಕು? ಮುಷ್ಟಿಯಲ್ಲಿ ಉದ್ದಿನ ಕಾಳುಗಳನ್ನು ಹಿಡಿದು, "ಯಾ ಔಷಧೀಃ'' ಎಂಬ ವೇದಮಂತ್ರವನ್ನು ಅಂದರು. ಉದ್ದುಗಳೆಲ್ಲ ಮೊಳಕೆಯೊಡೆದು ಬಳ್ಳಿಯಾಗಿ ಹಬ್ಬಿವೆ. ಅರಸನಿಗೆ ಸೋಜಿಗವಾಯಿತು. ಅವನು ಆಚಾರ್ಯರಿಗೆ ವಿನಯದಿಂದ ವಂದಿಸಿದನು.

ಗೊಮತೀ ತೀರದಲ್ಲಿಯೇ ಕುಳಿತು ಆಚಾರ್ಯರು ಪ್ರವಚನವನ್ನು ಹೇಳುತ್ತಿದ್ದರು. ಒಂದು ದಿನ ಕತ್ತಲೆಯಾಗಿದೆ. ದೀಪಗಳನ್ನು ಹಚ್ಚಿದ್ದರು. ಆದರೆ ಪ್ರವಚನ ನಡೆದ ಕಾಲಕ್ಕೆ ಬಿರುಗಾಳಿ ಬೀಸಿ ದೀಪಗಳಾರಿದವು. ಮುಂದೇನು ಮಾಡಬೇಕೆಂದು ಶಿಷ್ಯರು ಚಿಂತೆಗೊಳಗಾದರು. ಆಚಾರ್ಯರು ತಮ್ಮ ಪಾದಾಂಗುಷ್ಠದಲ್ಲಿ ತೇಜಸ್ಸನ್ನು ನಿರ್ಮಿಸಿದರು. ಅದು ಎಲ್ಲ ಕಡೆಗೂ ಬೆಳಕು ಕೆಡವಿತು. ಆ ಬೆಳಕಿನಿಂದಲೇ ಮುಂದೆ ಪ್ರವಚನವು ಸಾಗಿತು.

ಆಚಾರ್ಯರು ಶಿಷ್ಯಪರಿವಾರದೊಂದಿಗೆ ಮುಂದೆ ಹೊರಟಿರುವರು. ದಾರಿಯಲ್ಲಿ ಭದ್ರಾನದಿಯ ದಂಡೆಯಲ್ಲಿ ಒಂದು ಕಲ್ಲುಬಂಡೆ ಬಿದ್ದಿತ್ತು. ಜೊತೆಗೆ ಬಂದ ಜನರನ್ನು "ಇದು ಇಲ್ಲೇಕೆ ಬಿದ್ದಿದೆ'' ಎಂದು ಆಚಾರ್ಯರು ಕೇಳಿದರು. ಆ ಕಲ್ಲನ್ನು ಜಲಪಾತವಿದ್ದಲ್ಲಿಡಬೇಕಾಗಿತ್ತು. ಸಾವಿರಾರು ಜನರು ಕೂಡಿ ತರುತ್ತಿದ್ದರು. ಕೈಲಾಗದೆ ಅರ್ಧಕ್ಕೇ ಬೇಸತ್ತು ಅಲ್ಲಿಯೇ ಬಿಟ್ಟಿದ್ದರು. ಇದನ್ನೆಲ್ಲ ಆಚಾರ್ಯರಿಗೆ ಶಿಷ್ಯರು ಹೇಳಿದರು. ಅದನ್ನು ಕೇಳಿ ಆಚಾರ್ಯರು ತಾವೊಬ್ಬರೇ ಆ ಕಲ್ಲನ್ನು ಎಡಗೈಯಿಂದ ಎತ್ತಿ ಜಲಪಾತವಿದ್ದಲ್ಲಿಗೆ ಸಾಗಿಸಿದರು. ಇದನ್ನು ನೋಡಿ ಆಚಾರ್ಯರು ಭೀಮಸೇನರೇ ಎಂದು ಜನರೆಲ್ಲ ನಿಶ್ಚಯಿಸಿದರು.

ಈಗಲೂ ಮೈಸೂರು ಸೀಮೆಯ ಬಾಳೇಹೊನ್ನೂರು ತಾಲೂಕಿನ ಕಳಸವೆಂಬ ಊರ ಹತ್ತಿರ ಈ ಕಲ್ಲು ಇದೆ. "ಶ್ರೀಮದಾಚಾರ್ಯೈರೇಕಹಸ್ತೇನಾನೀಯ ಸ್ಥಾಪಿತಾಶಿಲಾ" ಎಂದು ಆ ಕಲ್ಲಿನ ಮೇಲೆ ಬರೆದಿದೆ. ಆ ಕಲ್ಲಿಗೆ "ಭೀಮುಗಲ್ಲು" ಎನ್ನುವರು.

ಒಂದು ದಿನ ಸೂರ್ಯಗ್ರಹಣ. ಆಚಾರ್ಯರು ಸಮುದ್ರ ಸ್ನಾನಕ್ಕೆ ಹೋಗಿರುವರು. ಜನೌಘವೂ ಅಲ್ಲಿ ಸ್ನಾನಕ್ಕಾಗಿ ಬಂದಿದೆ. ಸರ್ವಜ್ಞರೊಂದಿಗೆ ಎಲ್ಲರೂ ಸ್ನಾನವನ್ನು ಮಾಡಿದರು. ಸಮುದ್ರ ದಂಡೆಯ ಮೇಲೆ ಆಚಾರ್ಯರನ್ನು ನೋಡುತ್ತ ಎಲ್ಲರೂ ಕುಳಿತಿದ್ದರು. ಆಚಾರ್ಯರು ಉಚ್ಚಾಸನದ ಮೇಲೆ ಕುಳಿತು ಪ್ರವಚನ ಹೇಳುತ್ತಿರುವರು. ಸಮುದ್ರವು ಉಕ್ಕೇರ ಹತ್ತಿದೆ. ಅದರ ಗಂಭೀರ ಧ್ವನಿಯು ಹೆಚ್ಚಾಯಿತು. ವ್ಯಾಖ್ಯಾನವು ಜನರಿಗೆ ಕೇಳಿಸದಂತಾಯಿತು. ಜನರೆಲ್ಲ ಸಮುದ್ರದ ಕಡೆಗೆ ನೋಡಹತ್ತಿದರು. ಇದನ್ನು ನೋಡಿ ಆಚಾರ್ಯರು ಸಮುದ್ರಕ್ಕೆ ಶಾಂತನಾಗೆಂದು ಸನ್ನೆಮಾಡಿದರು. ಕೂಡಲೆ ಸರಿತ್ಪತಿಯು ಸಣ್ಣ ಕೆರೆಯಂತೆ ಶಾಂತನಾದನು. ಹೀಗೆ ಅನೇಕ ವಿಚಿತ್ರ ಲೀಲೆಗಳನ್ನು ಮಾಡುತ್ತಿರುವ ಆಚಾರ್ಯರ ಕೀರ್ತಿಯನ್ನು ಕೇಳಿ, ದ್ವೇಷಿಗಳ ಹೃದಯದಲ್ಲಿ ಕಿಚ್ಚು ಹಿಡಿಸದಾಯಿತು. ಗಂಡವಾಟ ಪೂರ್ವವಾಟರೆಂಬವರಿಬ್ಬರು ಆಚಾರ್ಯರ ಮೈಮೇಲೇರಿ ಹೋಗಿ ಕತ್ತು ಹಿಚುಕಲು ಪ್ರಯತ್ನಿಸಿದರು. ಆಚಾರ್ಯರು ಶಾಂತರಾಗಿ ಕುಳಿತರು. ಅವರಿಬ್ಬರೂ ಅವರ ಕುತ್ತಿಗೆಯನ್ನು ಹಿಸುಕಿ ಕೈಸೋತು ದಣಿದರು. ಆಚಾರ್ಯರಿಗೆ ಏನೂ ಆಗಲಿಲ್ಲ. ಎಲ್ಲರೂ ಬೆರಗಾದರು. ಆ ಪೂರ್ವವಾಟ ಗಂಡವಾಟರನ್ನೇ ನಿಂದಿಸಿದರು. ಆಚಾರ್ಯರು ನೆಲದ ಮೇಲೆ ಕೈಯಿಟ್ಟು ಕೈಯನ್ನೆತ್ತಲು ಅವರಿಗೆ ಹೇಳಿದರು. ಅದಕ್ಕಾಗಿ ಅವರು ಎಷ್ಟು ಪ್ರಯತ್ನಮಾಡಿದರೂ ನಿಷ್ಫಲವಾಯಿತು. ಸಣ್ಣ ಮೋರೆಯಿಂದ ಅವರು ಓಡಿ ಹೋದರು. ಇಷ್ಟರಲ್ಲಿ ಆಚಾರ್ಯರು ಒಬ್ಬ ಸಣ್ಣ ಬಟುವಿನ ಮೇಲೆ ಕುಳಿತು ನರಸಿಂಹಗುಡಿಯ ಪ್ರದಕ್ಷಿಣೆ ಹಾಕಿದರು. ಈ ಎಲ್ಲ ಅದ್ಭುತ ಲೀಲೆಗಳನ್ನು ನೋಡಿ ಜನರು ಸರ್ವಜ್ಞಾ

ಚಾರ್ಯರಿಗೆ ಅಷ್ಟೈಶ್ವರ್ಯಸಿದ್ಧಿಯಿದೆ ಎಂದು ಮನಗಂಡರು. ಮತ್ತೆ ಕೆಲವು ದ್ವೇಷಿಗಳು ಆಚಾರ್ಯರ ಹತ್ತರ ಬಂದು ಅವರ ಮೂಗಿನ ಮೇಲೆ ಗುದ್ದುವದು, ಚಿಮ್ಮಟಿಗೆಯಿಂದ ಕೂದಲು ಕಿತ್ತುವದು ಮೊದ ಲಾದ ಉಪದ್ರವಗಳನ್ನು ಕೊಟ್ಟರು. ಆದರಿಂದಲೂ ಆಚಾರ್ಯರಿಗೆ ಯಾವ ತೊಂದರೆಯೂ ಆಗದೆ ದ್ವೇಷಿಗಳೇ ಸೋತು ಹೋಗಬೇಕಾ ಯಿತು.

ಸರ್ವಜ್ಞರು ಪ್ರವಾಸ ಮಾಡುತ್ತ ಪಾರಂತೀ ಗುಡಿಗೆ ಬಂದಿರು ವರು. ಅಲ್ಲಿಯ ದೇವಾಲಯದಲ್ಲಿ ಹೊಕ್ಕರು. ತಾವು ಭೀಮಾವತಾರ ಕಾಲಕ್ಕೆ ಸ್ಥಾಪಿಸಿದ ದೇವರಿಗೆ ಇಂದು ಪೂಜೆಯಿಲ್ಲದುದನ್ನು ಕಂಡು ಮರುಗಿದರು. ಊರ ಅರಸನಿಗೆ ಹೇಳಿ ನಿತ್ಯಪೂಜಾದಿಗಳು ನಡೆಯು ವಂತೆ ವ್ಯವಸ್ಥೆ ಮಾಡಿಸಿದರು. ಮಂಗಳೂರ ಪ್ರಾಂತದ ಕುಮಾರ ಧಾರೀ ನೇತ್ರಾವತೀ ನದಿಗಳ ಮಧ್ಯ ಭಾಗದಲ್ಲಿ ಬಹು ದಿನಗಳಿಂದ ಮಳೆ ಬೀಳದೆ ಬರಗಾಲವು ಬಹಳವಾಗಿ ಹಬ್ಬಿಕೊಂಡಿತ್ತು. ಇದನ್ನು ನೋಡಿ ಆಚಾರ್ಯರು ಬೇಸಿಗೆಯಲ್ಲಿಯೂ ಪ್ರಚಂಡ ಮಳೆಗರೆಯಿಸಿ ಎಲ್ಲ ಕಡೆಗೂ ನೀರೇನೀರು ಮಾಡಿಸಿದರು. ಮುಂದೆ ಮತ್ತೊಂದು ಊರಿಗೆ ಆಚಾರ್ಯರು ಹೋಗಿರುವರು. ಅಲ್ಲಿಯೊಬ್ಬ ಶೂದ್ರ ಭೂಪ ತಿಯು ಆಚಾರ್ಯರ ದ್ವೇಷಿಗಳಿಂದ ಪ್ರೇರಿತನಾಗಿ ಇವರನ್ನು ಹೊಡೆ ಯಬೇಕೆಂದು ಮುಂದೆ ಬಂದನು. ಆಚಾರ್ಯರನ್ನು ನೋಡಿ ಬೆರಗಾಗಿ ಮೈಮರೆತು ಅವರಿಗೆ ವಂದಿಸಿದನು. ಅಲ್ಲಿಂದ ಸರ್ವಜ್ಞರು ವೈದ್ಯ ನಾಥ (ಧನ್ವಂತರಿ) ಕ್ಷೇತ್ರಕ್ಕೆ ಬಂದರು. ಅಲ್ಲಿಯ ಶಿಷ್ಯನ ಬಿನ್ನಹ ವನ್ನು ಮನ್ನಿಸಿ ಶ್ರೀಕೃಷ್ಣಾಮೃತಮಹಾರ್ಣವವನ್ನು ಅಲ್ಲಿಯೇ ರಚಿಸಿದರು.

ಶ್ರೀಮದಾಚಾರ್ಯರನ್ನು ಸೋಲಿಸಲು ಕೊನೆಯ ಪ್ರಯತ್ನ ವೆಂದು ಕೆಲವರು ಇವರೊಂದಿಗೆ ವಾದಕ್ಕೆ ಬಂದರು. ಇವರು ಸನ್ಯಾ ಸಿಗಳು; ಇವರಿಗೆ ಯಜ್ಞವಿಭಾಗಗಳೇನು ಗೊತ್ತು ಎಂದು ಅವರು ಯೋಚಿಸಿದರು. "ವೈಷಷ್ಮೇನಾಹ್ನಾಂ'' ಎಂಬ ಮಹಾನಾಮ್ನಿಯು

ಯಾಜ್ಞಿಕ ವಿಷಯದಲ್ಲಿಯ ಶ್ರುತ್ಯರ್ಥವನ್ನು ಆಚಾರ್ಯರಿಗೆ ಕೇಳಿದರು. ಆಚಾರ್ಯರಾದರೋ ನಿರಾಯಾಸವಾಗಿ ಗೃಹ್ಯಸೂತ್ರಗಳನ್ನೂ ಅವತಾರಿಕೆಗಳನ್ನೂ ಹೇಳುತ್ತ ಯಜ್ಞವಿಭಾಗವನ್ನೂ ಅದರ ರೀತಿಗಳನ್ನೂ ಹೇಳಿದರು. ಇವರು ಹೇಳುವಾಗ ಶಿಷ್ಯರು ಅದನ್ನೇ ಬರೆದರು. ಅದೇ ಇಂದು ಕರ್ಮನಿರ್ಣಯ ಗ್ರಂಥವಾಗಿದೆ. ಹೀಗೆ ನಿರಾಬಾಧವಾಗಿ ಸರ್ವಜ್ಞರು ಹೇಳುವದನ್ನು ಕೇಳಿ ವಾದಿಗಳು ಪರಾಜಿತರಾಗಿ ನಮಸ್ಕರಿಸಿದರು.

ಆಚಾರ್ಯರು ಈಶಾವಾಸ್ಯ, ಕೇನ, ಕಠ, ಮಾಂಡೂಕ್ಯ, ಐತರೇಯ ತೈತ್ತರೇಯ, ಛಾಂದೋಗ್ಯ, ಬೃಹದಾರಣ್ಯಕ, ಅಥರ್ವಣ, ಷಟ್ ಪ್ರಶ್ನ ಹೀಗೆ ಹತ್ತು ಉಪನಿಷತ್ತುಗಳಿಗೆ ಭಾಷ್ಯವನ್ನು (೧೧) ಗೀತಾಭಾಷ್ಯ (೧೨) ಗೀತಾತಾತ್ಪರ್ಯ (೧೩) ಸೂತ್ರಭಾಷ್ಯ (೧೪) ಅಣುಭಾಷ್ಯ (೧೫) ಅನುವ್ಯಾಖ್ಯಾನ (೧೬) ನ್ಯಾಯವಿವರಣ (೧೭) ನಖಸ್ತುತಿ (೧೮) ಯಮಕಭಾರತ (೧೯) ದ್ವಾದಶಸ್ತೋತ್ರ (೨೦) ಕೃಷ್ಣಾಮೃತಮಹಾರ್ಣವ (೨೧) ತಂತ್ರಸಾರ (೨೨) ಸದಾಚಾರಸ್ಮೃತಿ (೨೩) ಯತಿಪ್ರಣವಕಲ್ಪ (೨೪) ಜಯಂತಿನಿರ್ಣಯ (೨೫) ಭಾಗವತ ತಾತ್ಪರ್ಯ (೨೬) ತಾತ್ಪರ್ಯ ನಿರ್ಣಯ (೨೭) ಸಂಹಿತಾಭಾಷ್ಯ (೨೮) ಪ್ರಮಾಣಲಕ್ಷಣ (೨೯) ಕಥಾಲಕ್ಷಣ (೩೦) ಉಪಾಧಿಖಂಡನ (೩೧) ಮಾಯಾವಾದಖಂಡನ (೩೨) ಪ್ರಪಂಚಮಿಥ್ಯಾತ್ವಾನುಮಾನಖಂಡನ (೩೩) ತತ್ವಸಂಖ್ಯಾನ (೩೪) ತತ್ವವಿವೇಕ (೩೫) ತತ್ವೋದ್ಯೋತ (೩೬) ಕರ್ಮನಿರ್ಣಯ (೩೭) ತತ್ವನಿರ್ಣಯ ಹೀಗೆ ಮೂವತ್ತೇಳು ಗ್ರಂಥಗಳನ್ನು ರಚಿಸಿದರು.

## ಬದರೀವಾಸ

ಈ ಪರಿ ಅನೇಕ ಬಗೆಯ ಲೀಲೆಗಳನ್ನು ಮಾಡುತ್ತ, ದೇಶವನ್ನೆಲ್ಲ ಸಂಚರಿಸಿ ಅಗಾಧ ಪಾಂಡಿತ್ಯ, ಸ್ವಾನುಭವ, ಓಜಸ್ಸು, ತೇಜಸ್ಸುಗಳಿಂದ ಮಾಯಾವಾದಿಗಳನ್ನು ಗೆದ್ದು ವಿಷ್ಣುವೇ ಸರ್ವೋತ್ತಮ, ಸಚ್ಚಿದಾನಂದಾದಿಗುಣಪರಿಪೂರ್ಣ. ಜೀವಕೋಟಿಗಳೆಲ್ಲ ಅವನ

ದಾಸರು. ಎಂಬಿವೇ ಮೊದಲಾದ ತತ್ವಗಳನ್ನು ಬೀರುತ್ತ ಭಕ್ತ ಜನರನ್ನು ತಮ್ಮ ದರ್ಶನ ಉಪದೇಶಗಳಿಂದ ಮುಕ್ತರನ್ನು ಮಾಡುತ್ತ ಅಖಿಲ ಭಾರತ ದೇಶದಲ್ಲಿ ತಿರುಗಾಡಿ ಪ್ರಮುಖ ಶಿಷ್ಯಪರಿವಾರದೊಂದಿಗೆ ಬದರೀಕ್ಷೇತ್ರಕ್ಕೆ ಸರ್ವಜ್ಞರು ಬಂದಿರುವರು. ಶಿಷ್ಯಸಮೂಹಕ್ಕೆ ಉಪದೇಶ ಮಾಡುತ್ತಿರುವರು. ಸತ್ಯತತ್ವವನ್ನು ಶಿಷ್ಯರ ಹೃದಯದಲ್ಲಿ ಬೀರುತ್ತಿರುವರು. ಅಂದಿನ ಪ್ರವಚನದ ಪ್ರಕಾರವೇ ಬೇರೆಯಾಗಿತ್ತು. ಸರ್ವಜ್ಞಾಚಾರ್ಯರಿಗೆ ಮಾತ್ರ ಇದೇ ಕೊನೆಯ ಉಪದೇಶವೆಂದು ಗೊತ್ತು. ಅದಕ್ಕಾಗಿ ಅಷ್ಟೊಂದು ಪರಿಯಿಂದ ಹೇಳುತ್ತಿರುವರು. ಪದ್ಮನಾಭತೀರ್ಥರೇ ಮೊದಲಾದ ಶಿಷ್ಯರು ಏಕಚಿತ್ತರಾಗಿ ಕೇಳುತ್ತಿರುವರು. ಎದುರಿನಲ್ಲಿ ಸಾಕ್ಷಾನ್ನಾರಾಯಣನು; ಬಲಬದಿಯಲ್ಲಿ ತ್ರಿಲೋಕಪಾವನೆಯಾದ ಗಂಗೆಯು. ಈ ಸೌಂದರ್ಯವನ್ನೂ ಸೌಭಾಗ್ಯವನ್ನೂ ಸೊಗಸನ್ನೂ ನೋಡಿ, ಉಪದೇಶವನ್ನು ಮನದಣಿ ಕೇಳಿ ದೇವತೆಗಳು ಶ್ರೀಮದಾಚಾರ್ಯರ ಚರಿತ್ರವನ್ನು ಪಾಡಿ ಅವರ ಮೇಲೆ ಹೂವಿನ ಮಳೆಗರೆದರು. ಶಿಷ್ಯರೆಲ್ಲರೂ ಹೂವುಗಳೆಲ್ಲಿಂದ ಬಂದವೆಂದು ಮೇಲೆ ನೋಡಿದರು. ದೇವತೆಗಳೂ ಗಂಧರ್ವರೂ ಆಚಾರ್ಯರ ಚರಿತ್ರೆಯನ್ನು ಗಾನ ಮಾಡುತ್ತಿರುವದನ್ನು ಕೇಳಿದರು.

ಮೊದಲು ಬಾದರಾಯಣರ ಕಡೆಗೆ ಹೋಗುವಾಗ ಹೇಳಿದ ಮಾತನ್ನೇ ಶ್ರೀಮದಾಚಾರ್ಯರು ಮತ್ತೊಮ್ಮೆ ಹೇಳಿದರು. ಆ ದಿನದ ಪ್ರವಚನವು ಮುಗಿದಿದೆ. ದೇವಗಾನದಿಂದ ಶಿಷ್ಯರಿಗೆಲ್ಲ ನಿದ್ದೆ ಬಂದಂತಾಗಿದೆ. ಎಚ್ಚತ್ತು ನೋಡುವಷ್ಟರಲ್ಲಿ ಆಚಾರ್ಯರು ಇದ್ದಿಲ್ಲ. ಎಲ್ಲಿಂದಲೋ ಆಚಾರ್ಯರ ಧ್ವನಿಯು ಕೇಳಿಸಿತು· "ನಾನು ಶ್ರೀವೇದವ್ಯಾಸರ ಸೇವೆಗಾಗಿ ಹೋಗುವೆನು. ನೀವು ಕೆಳಗಿಳಿದು ಹೋಗಿ ನಾನು ಪ್ರಸ್ಥಾಪಿಸಿದ ಸಿದ್ಧಾಂತವು ಆಚಂದ್ರಾರ್ಕ ಉಜ್ವಲವಾಗಿರುವಂತೆ ಮಾಡಿರಿ. ವ್ಯಾಸಾಜ್ಞೆಯಾದರೆ ನಿಮಗೆ ಮತ್ತೆ ದರ್ಶನಕೊಡಬಹುದು. ನೀವು ಹೋಗಿರಿ" ಎಂದು ಆಜ್ಞೆಯಾಯಿತು. ಅದೇ ದಿನವು ಮಾಘ ಶುದ್ಧ ನವಮಿ. ಪದ್ಮನಾಭತೀರ್ಥರು ಗುರುಗಳ ಆಜ್ಞೆಯಂತೆ ಹೊರಟರ

ಇಳಿದು ಬಂದು ಸರ್ವಜ್ಞಪೀಠವನ್ನು ಯಥಾಯೋಗ್ಯವಾಗಿ ಪರಿಪಾಲಿಸುತ್ತಿದ್ದರು. ಶ್ರೀಮದಾಚಾರ್ಯರು ಶ್ರೀವ್ಯಾಸರ ಸೇವೆಯಲ್ಲಿ ನಿರತರಾದುದೂ ಅವರು ಮತ್ತೆ ಇತ್ತ ಬರುವದು ಅಶಕ್ಯವೆಂಬುದೂ ಪದ್ಮನಾಭರಿಗೆ ತಿಳಿಯದಿರಲಿಲ್ಲ. ಆದರೆ ಆಗಾಗ ಶ್ರೀಮದಾನಂದ ತೀರ್ಥರು ಪದ್ಮನಾಭರ ಸ್ವಪ್ನದಲ್ಲಿ ಬಾರದಿರಲಿಲ್ಲ. ಹೀಗೆ ದೇವತಾಕಾರ್ಯವನ್ನು ಮುಗಿಸಿ ಶ್ರೀಮಧ್ವರೂಪದಿಂದ ವೇದವ್ಯಾಸರ ಸೇವೆಯನ್ನು ಇಂದಿಗೂ ವಾಯುದೇವರು ಮಾಡುತ್ತಿರುವರು. ಭೂಮಂಡಲದಲ್ಲಿ ಮೊದಲಿನ ಸತ್ಯಜ್ಞಾನ ಸೂರ್ಯನು ತನ್ನ ಪ್ರಖರ ಕಿರಣಗಳಿಂದ ಎಲ್ಲರನ್ನೂ ಸಂತೋಷಬಡಿಸುತ್ತಿರುವನು. ಮಧ್ವಮತದ ಸಿದ್ಧಾಂತವನ್ನು ಅನುಸರಿಸುವವರೇ ಧನ್ಯರಲ್ಲವೆ? ಅದಕ್ಕೆಂದೇ ದಾಸರಾಯರು "ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ. ಬಿಟ್ಟು ಕೆಡಬೇಡಿ" ಎಂದು ಪದೇ ಪದೇ ಹಾಡಿದ್ದಾರೆ.

ಬ್ರಹ್ಮಾಂತಾ ಗುರವಃ ಸಾಕ್ಷಾತ್ ಇಷ್ಟಂ ದೈವಂ ಶ್ರಿಯಃ ಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನೀ ॥

**ಶ್ರೀಮಧ್ವೇಶಾರ್ಪಣಮಸ್ತು.**

